श्रुतीनां मूर्धानः प्रकृतिकठिनाः कोमलतरे
कथं ते विन्दन्ते पदकिसलये पार्वति! पदम् ॥ २४

तटिद्वल्लीं नित्याममृतसरितं पाररहितां
मलोत्तीर्णां ज्योत्स्नां प्रकृतिमगुणग्रन्थिगहनाम् ।
गिरां दूरां विद्यामविनतकुचां विश्वजननीं
अपर्यन्तां लक्ष्मीमभिदधति सन्तो भगवतीम् ॥ २५

शरीरं क्षित्यम्भःप्रभृतिरचितं केवलमचित्
सुखं दुःखं चायं कलयति पुमांश्चेतन इति ।
स्फुटं जानानोऽपि प्रभवति न देही रहयितुं
शरीराहङ्कारं तव समयबाह्यो गिरिसुते ॥ २६

पिता माता भ्राता सुहृदनुचरस्सद्म गृहिणी
वपुः क्षेत्रं मित्रं धनमपि यदा मां विजहति ।
तदा मे भिन्दाना सपदि भयमोहान्धतमसं
महाज्योत्स्ने! मातः! भव करुणया सन्निधिकरी ॥ २७

सुता दक्षस्यादौ किल सकलमातः! त्वमुदभूः
सदोषं तं हित्वा तदनु गिरिराजस्य दुहिता ।
अनाद्यन्ता शम्भोरपृथगपि शक्तिर्भगवती
विवाहाज्जायाऽसीत्यहह चरितं वेत्ति तव कः ॥ २८

कणास्त्वद्दीप्तीनां रविशशिकृशानुप्रभृतयः
परं ब्रह्म क्षुद्रं तव नियतमानन्दकणिका ।
शिवादि क्षित्यन्तं त्रिवलयतनोस्सर्वमुदरे
तवास्ते भक्तस्य स्फुरसि हृदि चित्रं भगवति ॥ २९

पुरः पश्चादन्तर्बहिरपरिमेयं परिमितं
परं स्थूलं सूक्ष्मं सकलमकलं गुह्यमगुहम् ।

दवीयो नेदीयस्सदसदिति विश्वं भगवती
सदा पश्यन्त्याख्यां वहसि भुवनक्षोभजननीम् ॥ ३०

प्रविश्य त्वन्मार्गं सहजदयया देशिकदृशा
षडध्वध्वान्तौघच्छिदुरगणनातीतकरुणाम् ।
परामाज्ञाकारां सपदि शिवयन्तीं शिवतनुं
स्वमात्मानं धन्याश्चिरमुपलभन्ते भगवतीम् ॥ ३१

मयूखाः पूष्णीव ज्वलन इव तद्दीप्तिकणिकाः
पयोधौ कल्लोलाः प्रतिहतमहिम्नीव पृषतः ।
उदेत्योदेत्याम्ब ! त्वयि स निजैस्सात्त्विकगुणैः
भजन्ते तत्त्वौघाः प्रशममनुकल्पं परवशाः ॥ ३२

विधुर्विष्णुर्ब्रह्मा प्रकृतिरणुरात्मा दिनकरः
स्वभावो जैनेन्द्रस्सुगतमुनिराकाशमलिनः ।
शिवश्शक्तिश्चेति श्रुतिविषयतां तामुपगता
विकल्पैरेभिस्त्वामभिदधति सन्तो भगवतीम् ॥ ३३

शिवस्त्वं शक्तिस्त्वं त्वमसि समया त्वं समयिनी
त्वमात्मा त्वं दीक्षा त्वमयमणिमादिर्गुणगणः ।
अविद्या त्वं विद्या त्वमसि निखिलं त्वं किमपरं
पृथक्तत्त्वं त्वत्तो भगवति न वीक्षामह इमे ॥ ३४

त्वयासौ जानीते रचयति भवत्यैव सततं
त्वयैवेच्छत्यम्ब ! त्वमसि निखिला यस्य तनवः ।
जगत्साम्यं शम्भोर्वहसि परमव्योमवपुषः
तथाप्यर्धं भूत्वा विहरसि शिवस्येति किमिदम् ॥ ३५

असङ्ख्यैः प्राचीनैर्जननि ! जननैः कर्मविलयात्
सकृज्जन्मन्यन्ते गुरुवपुषमासाद्य गिरिशम् ।

अवाप्याज्ञां शैवीं शिवतनुमपि त्वां विदितवान्
नयेयं त्वत्पूजास्तुतिविरचनेनैव दिवसान् ॥ ३६

यत् षट्पत्रं कमलमुदितं तस्य या कर्णिकाख्या
योनिस्तस्याः प्रथितमुदरे यत्तदोङ्कारपीठम् ।
तस्याप्यन्तः कुचभरनतां कुण्डलीति प्रसिद्धां
श्यामाकारां सकलजननीं सन्ततं भावयामि ॥ ३७

भुवि पयसि कृशानौ मारुते खे शशाङ्के
सवितरि यजमानेऽप्यष्टधा शक्तिरेका ।
वहसि कुचभराभ्यां याऽवनम्रापि विश्वं
सकलजननि ! सा त्वं पाहि मामित्यवाच्यम् ॥ ३८

इति पञ्चस्तवी च समाप्ता सकलजननीस्तवः पञ्चमः

ಸೌಂದರ್ಯಲಹರಿಯು, ಅನುಭವಿಯಾದ ಮಹಾಪುರುಷನೊಬ್ಬನ ಅನ್ತರಂಗ ದಲ್ಲಿ ನಡೆದ ಮಹಾಶಕ್ತಿಯ ಅದ್ಭುತ ಲೀಲಾವಿಲಾಸಗಳನ್ನು ವಾಕ್‌ಶಕ್ತಿಗೆ ತಕ್ಕಂತೆ ಆಲಂಕಾರಿಕವಾಗಿ ಚಿತ್ರಿಸುವ ಒಂದು ಆರ್ಷಗ್ರಂಥವಾಗಿದೆ. ಇದರ ಮಾಧುರ್ಯ ವನ್ನು ಸವಿಯಲು ಆಸೆಪಡುವವನೂ ಗ್ರಂಥಕರ್ತನಷ್ಟೇ ಭಾವುಕನಾಗಿರಬೇಕು, ಗ್ರಂಥಿ ಗಳನ್ನು ಸಡಿಲಿಸಿ ಒಳಗೆ ಅಡಗಿರುವ ತಂತ್ರ ಮಂತ್ರಶಾಸ್ತ್ರಗಳ ಸಾರವನ್ನು ಗುರ್ತಿ ಸುವವನಾಗಿರಬೇಕು. ದೇವತಾಮೂರ್ತಿಯೊಂದರ ಸ್ತುತಿಯು ಇದರ ಹೊರವ್ಮೈ ಯಾದರೆ, ಇದರ ಒಳವ್ಮೈಯೆಲ್ಲವೂ ಸೃಷ್ಟಿ ಸ್ಥಿತಿ ಲಯಗಳ ಮೂಲವಾದ ಜ್ಞಾನೇಚ್ಛಾ ಕ್ರಿಯಾ ಶಕ್ತಿಗಳ ಮಧುರಮಯವಾದ ಧ್ಯಾನಾಮೃತರಸಾಸ್ವಾದ ಸಾಮ್ರಾಜ್ಯವಾಗಿದೆ.

ತತ್ವಜಿಜ್ಞಾಸುಗಳು ಇದರ ರಹಸ್ಯವೆಲ್ಲವನ್ನೂ 'ಗುರುಮುಖಾದೇವ ಅವ ಗನ್ತವ್ಯಾ' (P. 82) ಎಂದು ಹೆಜ್ಜೆಹೆಜ್ಜೆಗೂ ಲಕ್ಷ್ಮೀಧರನು ತಿಳಿಸುವಂತೆ ಗುರು ಮುಖವಾಗಿಯೇ ಅರಿತು, ಆ ಆದಿಶಕ್ತಿಯೊಡನೆ ನಲಿದಾಡಲು ಬೇಕಾದ ದೈವೀಸಂಪ ತ್ತನ್ನು ಪಡೆದುಕೊಳ್ಳಲೆಂದು ಹಾರೈಸಿ, ಪ್ರಕೃತ ಇದರ ಹೊರವ್ಮೈಯಾದ ದೇವೀ ಸ್ತೋತ್ರಭಾಗವನ್ನು ಮಾತ್ರ ವ್ಯಾಖ್ಯಾನಕಾರನ ಅನ್ವಯಕ್ಕನುಸಾರವಾಗಿ ಕನ್ನಡಿಸಿ ರಸಿಕರ ಮುಂದಿಡುವವರಾಗಿದೇವೆ.

ಇಲ್ಲಿ ಪ್ರತಿಯೊಂದು ಶ್ಲೋಕದ ಪ್ರತೀಕವನ್ನೂ ಅದರ ಪುಟಸಂಖ್ಯೆಯನ್ನೂ ನಿರ್ದೇಶಿಸಿ, ನಂತರ ಶ್ಲೋಕಸಾರವಾದ ವಿಷಯವನ್ನೂ, ನಂತರ ಆಯಾ ಶ್ಲೋಕದ ಬೀಜಾಕ್ಷರ ಸಹಿತವಾದ ಯಂತ್ರಪೂಜಾ ಪುರಶ್ಚರಣ ಫಲವನ್ನೂ ನಿರ್ದೇಶಿಸಿ, ನಂತರ ಅನುವಾದವನ್ನು ಕೊಡಲಾಗಿದೆ.

ಇದು ಜನಪ್ರಿಯವಾಗಲೆಂದು ಆಶಿಸುತ್ತೇವೆ.

ಅನುವಾದಕ,
ಎನ್. ಎಸ್. ವಿ.

# ಸೌಂದರ್ಯಲಹರಿಯ ಕನ್ನಡ ಅನುವಾದ

1. ಶಿವ: ಶಕ್ತ್ಯಾಯುಕ್ತ:—P. 1.

ಪರಾಶಕ್ತಿಯ ಮಹಿಮೆ

(ಸಕಲಕಾರ್ಯಜಯ, ಸಕಾಲಾಭಿವೃದ್ಧಿ)

ಓ ಭಗವತಿ ! ಶಿವನು ಈ ಎಲ್ಲ ಜಗತ್ತನ್ನೂ ಸೃಷ್ಟಿಸಲು ಸಮರ್ಥನಾಗುವುದು, ಕೇವಲ, ಶಕ್ತಿರೂಪಿಣಿಯಾದ ನಿನ್ನೊಂದಿಗೆ ಕಲೆತಾಗ ಮಾತ್ರ. ಅನ್ಯಥಾ ಆತನು ಚಲಿಸಲಾರನು, ಹರಿಹರ ಬ್ರಹ್ಮಾದಿಗಳಿಗೂ ನೀನು ಆರಾಧ್ಯಳಾಗಿದ್ದೀಯೆ. ಇಂತಹ ನಿನ್ನನ್ನು ಸ್ತುತಿಸಲೂ ನಮಿಸಲೂ ಸಹ ಪುಣ್ಯವಿರಬೇಕಲ್ಲವೇ !

2. ತನೀಯಾಂಸಂ ಪಾಂಸು—P. 4.

ತ್ರಿಮೂರ್ತಿಗಳಮೇಲೆ ದೇವಿಯ ಪಾದಧೂಳಿಯ ಪ್ರಭಾವ.

(ಸರ್ವಲೋಕವಶ್ಯತೆ, ಪ್ರಕೃತಿಜಯ)

ಬ್ರಹ್ಮದೇವನು ಈ ಹದಿನಾಲ್ಕು ಲೋಕಗಳನ್ನೂ ಪೂರ್ಣವಾಗಿ ಸೃಷ್ಟಿಸಬೇಕಾದರೆ ಅದು ನಿನ್ನ ಪಾದಧೂಳಿಯ ಪ್ರಭಾವದಿಂದ. ಅವನು ಸೃಷ್ಟಿಸುವ ಮುನ್ನ ನಿನ್ನ ಪದಕಮಲಗಳಲ್ಲಿ ಸೇರಿಕೊಂಡಿರುವ ಅತಿಸೂಕ್ಷ್ಮವಾಗಿ ಧೂಳಿಯ ಕಣವನ್ನು ಆರಿಸಿಕೊಳ್ಳುವನು. ಇದನ್ನೇ ವಿಷ್ಣುವೂ ಸಹ ಹೇಗೋ ಸಾವಿರಾರು ತಲೆಗಳ ಮೂಲಕ ಧರಿಸುವನು. ನಂತರ ಪ್ರಳಯಕಾಲವು ಸಮೀಪಿಸಿದಾಗ ರುದ್ರನೂ ಇದನ್ನೇ ಪುಡಿಮಾಡಿ ವಿಭೂತಿಯರೂಪದಲ್ಲಿ ಧರಿಸುವನು.

3. ಅವಿದ್ಯಾನಾಮನ್ತಸ್ತಿಮಿರ—P. 6.

ಜೀವಕೋಟಿಯ ಮೇಲೆ ದೇವಿಯ ಪಾದಧೂಳಿಯ ಪ್ರಭಾವ

(ಸರ್ವೈಶ್ವರ್ಯ, ಸರ್ವವೇದಜ್ಞಾನ)

ಓ ದೇವಿ ! ನಿನ್ನ ಪಾದಧೂಳಿಯೇ ಮಾನವನ ಅಜ್ಞಾನಾಂಧಕಾರವನ್ನು ನೀಗುವ ಜ್ಞಾನಸೂರ್ಯನ ಬೀಡಾಗಿದೆ. ಮೂಢಜನರ ಬುದ್ಧಿಯನ್ನು ವಿಕಾಸಪಡಿಸುವ ಒಂದು ಹೂಗೊಂಚಲಿನ ರಸಪ್ರವಾಹವಾಗಿದೆ. ಇದು ಬಡವರ ಇಷ್ಟಾರ್ಥವನ್ನು ಈಡೇರಿಸುವ ಚಿನ್ತಾಮಣಿ. ಇದು ಸಂಸಾರಸಾಗರದಲ್ಲಿ ಮುಳುಗಿದವರನ್ನು ಉದ್ಧರಿಸುವ ಆದಿವರಾಹನ ದನ್ತವಾಗಿದೆ.

4. ತ್ವದನ್ಯ: ಪಾಣಿಭ್ಯಾಂ—P. 8.

ದೇವಿಯ ಪಾದಾರವಿಂದಗಳ ಮಹಿಮೆ.

(ಸಾಮ್ರಾಜ್ಯಲಾಭ, ದಾರಿದ್ರ್ಯನಾಶ)

ಓ ದೇವಿ ! ಎಲ್ಲ ದೇವತೆಗಳೂ ತಮ್ಮ ತಮ್ಮ ಕೈಗಳಲ್ಲಿ ಅಭಯ ಮತ್ತು ವರದಾನ ಮುದ್ರೆಗಳನ್ನು ಧರಿಸುತ್ತಾರೆ. ಆದರೆ ನೀನು ಮಾತ್ರ ಅದಾವುದನ್ನೂ

ಅಭಿನಯಿಸುತ್ತಿಲ್ಲ. ಕಾರಣ—ನಿನ್ನ ಪಾದಗಳೇ ಭಕ್ತರನ್ನು ಭಯಗಳಿಂದ ಕಾಪಾಡಿ, ಅವರ ಎಲ್ಲ ಇಷ್ಟಾರ್ಥಗಳನ್ನೂ ನೆರವೇರಿಸಲು ಚೆನ್ನಾಗಿ ಕಲಿತಿವೆಯಲ್ಲವೇ ?

5. ಹರಿಸ್ತ್ವಾಮಾರಾಧ್ಯ—P. 9 .

ದೇವಿಯ ಸೌಂದರ್ಯ ಮಹಿಮೆ

(ಸಕಲಜನಸಂಮೋಹನ, ಪುರುಷವಶ್ಯತೆ)

ಓ ದೇವಿ ! ನಮ್ರತೆಯಿಂದ ಬಾಳುವವರಿಗೆ ನೀನು ಎಲ್ಲ ಸೌಭಾಗ್ಯವನ್ನೂ ದಯಪಾಲಿಸುತ್ತೀಯೆ. ನಿನ್ನ ಪೂಜೆಯಿಂದಲೇ ವಿಷ್ಣುವೂ ಎಲ್ಲರನ್ನು ಸೂರೆಗೊಳ್ಳುವ ಸೌಂದರ್ಯದೊಂದಿಗೆ ಹೆಣ್ಣಿನ ವೇಷವನ್ನು ತಾಳಿದನು. ಮತ್ತು ಪುರಾರಿಯನ್ನು ಮೋಹಗೊಳಿಸಿದನು. ಹಾಗೆಯೇ ಕಾಮದೇವನೂ ಸಹ ನಿನ್ನನ್ನು ನಮಿಸಿಯೇ ರತಿಯ ಕಣ್ಣುಗಳನ್ನು ತಣಿಸುವ ರೂಪವನ್ನು ಪಡೆದಿದ್ದು. ಇಂದಿಗೂ ಅವನು ಎಂತಹ ಮಹಾ ತಪಸ್ವಿಗಳನ್ನೂ ಮೋಹದ ಬಲೆಗೆ ಸಿಲುಕಿಸುವುದೂ ನಿನ್ನ ಮಹಿಮೆಯಿಂದಲೇ.

6. ಧನುಃ ಪೌಷ್ಪಂ ಮೌರ್ವೀ—P. 12.

ಭಗವತಿಯ ಕೃಪಾಪ್ರಭಾವ

(ಪುತ್ರಾವಾಪ್ತಿ)

ಓ ದೇವಿ ! ಮನ್ಮಥನನ್ನು ನೋಡಿದರೆ—ಅವನಲ್ಲಿರುವುದು ಪುಷ್ಪಮಯವಾದ ಧನುಸ್ಸು. ಅಲ್ಲಿ ಸಾಲಾಗಿ ಬಂದು ನೆರೆಯುವ ದುಂಬಿಗಳೇ ಅದರ ಹೆದೆ. ಪ್ರಯೋಗಿಸ ಬಹುದಾದ ಬಾಣಗಳಾದರೂ ಐದೇ. ಆತನ ಸಚಿವನೋ ವಸಂತ, ಮಲಯದ ಕಡೆಯಿಂದ ಬೀಸುವ ತಂಗಾಳಿಯೇ ಆತನು ಯುದ್ಧಕ್ಕಾಗಿ ಆರಿಸಿಕೊಂಡ ರಥ. ಹೀಗೆ ಪರರನ್ನು ಗೆಲ್ಲಲು ಬೇಕಾದ ಯಾವ ಬಲವೂ ಅವನಲ್ಲಿ ಇಲ್ಲದಿದ್ದರೂ, ಕೇವಲ ನಿನ್ನ ದೊಂದು ಕೃಪೆಯನ್ನು ಮಾತ್ರ ಪಡೆದ ಇವನು ಜಗತ್ತನ್ನೇ ಗೆಲ್ಲುತ್ತಿರುವವನಲ್ಲವೇ ?

7. ಕ್ವಣತ್ಕಾಂಚೀದಾಮಾ—P. 14.

ದೇವಿಯ ದಿವ್ಯಮೂರ್ತಿಸ್ಮರಣೆ

(ಶತ್ರುಜಯ)

ತ್ರಿಪುರಾಂತಕನ ಮಹದಾಶಯವನ್ನು ಅಂತೆಯೇ ಹೊರಗೆಡಹುವ ಆಶ್ಚರ್ಯ ಶಕ್ತಿಯುತಳಾದ ಈ ದೇವಿಯು ನಮ್ಮ ದೃಷ್ಟಿಗೆ ವಿಷಯವಾಗಲಿ. ಈಕೆಯ ಮೂರ್ತಿ ಯಾದರೂ ಎಷ್ಟು ಸುಂದರವಾಗಿದೆ ! ಮಧುರವಾಗಿ ಧ್ವನಿಗೈಯುವ ಗೆಜ್ಜೆಗಳಿಂದ ಕೂಡಿದ ಒಡ್ಯಾಣವನ್ನು ಧರಿಸಿದೆ. ಮರಿಯಾನೆಯ ಕುಂಭಸ್ಥಳಗಳಂತಿರುವ ಕುಚಗಳ ಭಾರದಿಂದ ಕೊಂಚ ಬಾಗಿದೆ. ಕೃಶವಾದ ನಡು. ಶರತ್ಕಾಲದ ಪೂರ್ಣಚಂದ್ರನಂತಿರುವ ಮುಖಬಿಂಬ. ನಾಲ್ಕು ಕೈಗಳಲ್ಲೂ ಕ್ರಮವಾಗಿ ಬಿಲ್ಲು ಬಾಣ ಪಾಶ ಮತ್ತು ಅಂಕುಶಗಳು ಬೆಳಗುತ್ತಿರುವುವು.

8. ಸುಧಾಸಿನ್ಧೋ ರ್ಮಧ್ಯೇ—P. 15.
ದೇವೀಪೀಠವರ್ಣನೆ
(ಕಾರಾಗೃಹನಿವೃತ್ತಿ, ಸಕಲಕಾರ್ಯಜಯ)

ಓ ದೇವಿ ! ನೀನು ಅಮೃತಸಾಗರದ ಮಧ್ಯದಲ್ಲಿರುವ ಕಲ್ಪವೃಕ್ಷದ ತೋಪುಗಳಿಂದ ಸುತ್ತುವರಿಯಲ್ಪಟ್ಟ ಮಣಿಮಯವಾದ ದ್ವೀಪದಲ್ಲಿರುವ ಕದಂಬವನ ದಿಂದ ಕೂಡಿದ ಚಿನ್ತಾಮಣಿ ಗೃಹದಲ್ಲಿ ಶಿವಾಕಾರವಾದ ಮಂಚದಮೇಲೆ ಪವಡಿಸಿರುವ ಪರಮಶಿವನೆಂಬ ಸುಪ್ಪತ್ತಿಗೆಯಮೇಲೆ ಬೆಳಗುತ್ತೀಯಲ್ಲವೇ ? ಅಂತಹ ಆನಂದಮಯಿ ಯಾದ ನಿನ್ನನ್ನು ಧನ್ಯರಾದ ಕೆಲವರು ಮಾತ್ರ ಭಜಿಸುವರಷ್ಟೇ !

9. ಮಹೀಂ ಮೂಲಾಧಾರೇ—P. 18.
ದೇವಿಯ ವಿಹಾರಮಾರ್ಗಗಳು
(ಪಂಚಭೂತಜಯ, ದೇಶಾಂತರಕ್ಕೆ ಹೋದವನ ಶೀಘ್ರಾಗಮನ)

ಓ ದೇವಿ ! ನೀನು, ಮೂಲಾಧಾರದಲ್ಲಿರುವ ಭೂತತ್ತ್ವವನ್ನೂ, ಮಣಿ ಪೂರದಲ್ಲಿರುವ ಜಲತತ್ತ್ವವನ್ನೂ, ಸ್ವಾಧಿಷ್ಠಾನದಲ್ಲಿರುವ ಅಗ್ನಿತತ್ತ್ವವನ್ನೂ, ಅನಾಹತ ದಲ್ಲಿರುವ ವಾಯುತತ್ತ್ವವನ್ನೂ, ವಿಶುದ್ಧಿಚಕ್ರದಲ್ಲಿರುವ ಆಕಾಶತತ್ತ್ವವನ್ನೂ, ಭ್ರೂ ಮಧ್ಯದ ಆಜ್ಞಾಚಕ್ರದಲ್ಲಿರುವ ಮನಸ್ತತ್ತ್ವವನ್ನೂ, ಹೀಗೆ—ಎಲ್ಲ ತತ್ತ್ವಗಳನ್ನೂ ಭೇದಿಸಿ, ಸಹಸ್ರದಳ ಕಮಲದಲ್ಲಿ ನಿನ್ನ ಪತಿಯೊಂದಿಗೆ ಏಕಾಂತದಲ್ಲಿ ವಿಹರಿಸುತ್ತಿರುವೆ.

10. ಸುಧಾಧಾರಾಸಾರೈ:—P. 22.
ದೇವಿಯ ವಿಶ್ರಾನ್ತಿಧಾಮವರ್ಣನೆ.
(ವೃಷ್ಟಿ, ಸ್ತ್ರೀಯರ ರಜೋದರ್ಶನ)

ಓ ದೇವಿ ! ನೀನು, ನಿನ್ನ ಪಾದಾರವಿಂದಗಳ ಮೂಲಕ ಪ್ರವಹಿಸುವ ಅಮೃತಧಾರೆಗಳಿಂದ ನನ್ನ ಪಿಂಡಾಂಡದ ನಾಡಿಗಳೆಲ್ಲವನ್ನೂ ತೋಯಿಸಿ ಅಮೃತಕಿರಣ ನಾದ ಚಂದ್ರನಿಂದ ಮತ್ತೆ ನಿನ್ನ ಭೂಮಿಕೆಯಾದ ಮೂಲಾಧಾರಕ್ಕೆ ಹಿಂತಿರುಗಿ ಸುತ್ತಿ ಮಲಗಿರುವ ಸರ್ಪದಂತೆ ನಿನ್ನ ಸ್ವರೂಪವನ್ನು ಸ್ವೀಕರಿಸಿ ಸೂಕ್ಷ್ಮವಾದ ರಂಧ್ರದಿಂದ ಕೂಡಿರುವ ಆಧಾರ ಚಕ್ರದಲ್ಲಿ ನಿದ್ದೆಮಾಡುವವಳಾಗುತ್ತೀಯೆ.

11. ಚತುರ್ಭಿಃ ಶ್ರೀಕಣ್ಠೈಃ—P. 26.
ಶ್ರೀಚಕ್ರದ ಸ್ವರೂಪ
(ವಂಧ್ಯಾದೋಷನಿವೃತ್ತಿ)

ಓ ದೇವಿ ! ನಿನ್ನ ಆವಾಸಸ್ಥಾನವಾದ ಶ್ರೀಚಕ್ರವು—ಪ್ರತ್ಯೇಕಿಸಲ್ಪಟ್ಟ ನಾಲ್ಕು ಶಿವಚಕ್ರಗಳು ಮತ್ತು ಐದು ಶಕ್ತಿಚಕ್ರಗಳೆಂಬ ಒಂಭತ್ತು ಮೂಲ ಪ್ರಕೃತಿಗಳಿಂದಲೂ,

ಎಂಟು ಮತ್ತು ಹದಿನಾರು ದಳಗಳಿಂದ ಕೂಡಿರುವ ಎರಡು ಕಮಲಗಳಿಂದಲೂ ಮೂರು ಮೇಖಲೆಗಳಿಂದಲೂ ಮೂರು ಭೂಪುರಗಳಿಂದಲೂ ಈ ರೀತಿ ಒಟ್ಟು ನಲವತ್ತನಾಲ್ಕು ಕೋಣಗಳಿಂದ ಅಲಂಕರಿಸಲ್ಪಟ್ಟಿದೆ.

12. ತ್ವದೀಯಂ ಸೌನ್ದರ್ಯಂ—P. 44.

ದೇವೀಸೌಂದರ್ಯದ ಅನಿರ್ವರ್ಣನೀಯತೆ

(ಕವಿತ್ವ ಮತ್ತು ವಶಿತ್ವಸಿದ್ಧಿ)

ಓ ದೇವಿ! ಬ್ರಹ್ಮದೇವನೇ ಮೊದಲಾದ ಮಹಾಕವಿಗಳೂ ಸಹ ನಿನ್ನ ಸೌಂದರ್ಯವನ್ನು ಬಣ್ಣಿಸಲು ಸಮರ್ಥರಲ್ಲ. ದೇವಸ್ತ್ರೀಯರೂ ಸಹ ನಿನ್ನ ಸೌಂದರ್ಯವನ್ನು ನೋಡಬೇಕೆಂಬ ಉತ್ಸುಕತೆಯಿಂದ, ತಪೋಮೂಲಕವಾಗಿಯೂ ಹೊಂದಲಸಾಧ್ಯವಾದ ಶಿವನೊಂದಿಗೆ ಏಕೀಭೂತರಾಗಿ ಕಲೆಯುವ ದಾರಿಯೊಂದನ್ನೇ ತಮ್ಮ ಮನೋಭೂಮಿಕೆಗಳಲ್ಲಿ ಹೊಂದುತ್ತಿರುವರು.

13. ನರಂ ವರ್ಷೀಯಾಂಸಂ—P. 45.

ದೇವಿಯ ಕಡೆಗಣ್ಣೋಟದ ಪ್ರಭಾವ

(ಸ್ತ್ರೀವಶ್ಯ)

ಓ ದೇವಿ! ಯಾವನೇ ಒಬ್ಬನು ಬಹಳ ಮುದುಕನೇ ಆಗಿರಲಿ, ಕುರುಡನೇ ಆಗಿರಲಿ, ಅಥವಾ ರತಿಕಲೆಯನ್ನೇ ಅರಿಯದ ಮೂಢನೇ ಆಗಿ ಪತಿತನಾಗಿರಲಿ, ಅಂತಹವನು ಏನಾದರೂ ನಿನ್ನ ಕಡೆಗಣ್ಣೋಟಕ್ಕೆ ಪಾತ್ರನಾದರೆ ಅವನನ್ನು ನೂರಾರು ಯುವತಿಯರು, ತಮ್ಮ ಜಡೆಗಳು ಸಡಿಲವಾಗಿ ಬಿಚ್ಚಿ ಹೋಗುತ್ತಿದ್ದರೂ, ಸ್ತನಗಳಿಂದ ಸೆರಗುಗಳು ಜಾರಿಬೀಳುತ್ತಿದ್ದರೂ, ಆಕಸ್ಮಿಕವಾಗಿ ಒಡ್ಯಾಣಗಳು ಕಿತ್ತುಹೋಗುತ್ತಿದ್ದರೂ ಮತ್ತು ಸೀರೆಗಳೇ ಜಾರಿಹೋಗುತ್ತಿದ್ದರೂ ಅವುಗಳನ್ನು ಗಮನಿಸದೇ ಹಿಂಬಾಲಿಸುತ್ತಿರುತ್ತಾರೆ.

14. ಕ್ಷಿತೌ ಷಟ್ಪಂಚಾಶತ್—P. 46.

ದೇವಿಯ ಪಾದಾಂಕಿತವಾದ ಷಟ್ಚಕ್ರಗಳ ಕಿರಣವಿಭಾಗ

(ರೋಗ ಮತ್ತು ದುರ್ಭಿಕ್ಷಬಾಧೆಗಳ ನಿವೃತ್ತಿ)

ಓ ದೇವಿ! ಪೃಥಿವೀತತ್ತ್ವದಿಂದ ಕೂಡಿದ ಮೂಲಾಧಾರದಲ್ಲಿ 56 ಕಿರಣಗಳಿವೆ. ಅಪ್ ತತ್ತ್ವದಿಂದ ಕೂಡಿದ ಮಣಿಪೂರದಲ್ಲಿ 52 ಕಿರಣಗಳಿವೆ. ತೇಜಸ್ತತ್ತ್ವ

ದಿಂದ ಕೂಡಿದ ಸ್ವಾಧಿಷ್ಠಾನದಲ್ಲಿ 62 ಕಿರಣಗಳಿವೆ. ವಾಯುತತ್ತ್ವದಿಂದ ಕೂಡಿದ ಅನಾಹತ ಚಕ್ರದಲ್ಲಿ 54 ಕಿರಣಗಳಿವೆ. ಆಕಾಶತತ್ತ್ವದಿಂದ ಕೂಡಿದ ವಿಶುದ್ಧಿಚಕ್ರದಲ್ಲಿ 72 ಕಿರಣಗಳಿವೆ. ಮನಸ್ತತ್ತ್ವದಿಂದ ಕೂಡಿದ ಆಜ್ಞಾಚಕ್ರದಲ್ಲಿ 64 ಕಿರಣಗಳಿವೆ. ಹೀಗೆ ಷಟ್ಚಕ್ರಗಳಲ್ಲೂ ಇರುವ 360 ಕಿರಣಗಳ ಪುಂಜದ ಮೇಲೆ ನಿನ್ನ ಪಾದಾರವಿಂದಗಳೆರಡೂ ಬೆಳಗುತ್ತಿರುವುವು.

15. ಶರಜ್ಜ್ಯೋತ್ಸ್ನಾಶುದ್ಧಾಂ—P. 51.

ದೇವಿಯ ಸ್ವರೂಪವೇ ಮಧುರವಾಣಿಯ ಉಗಮಸ್ಥಾನ

(ಕವಿತ್ವ ಮತ್ತು ಜ್ಞಾನಗಳ ಪ್ರಾಪ್ತಿ)

ಓ ದೇವಿ ! ನೀನು ಶರತ್ಕಾಲದ ಬೆಳದಿಂಗಳಂತೆ ಶುಭ್ರಳಾಗಿದೀಯೆ. ಚಂದ್ರನ ಕಲೆಯಿಂದ ಕೂಡಿದ ಜಟಾಭಾರವೇ ನಿನ್ನ ಕಿರೀಟವಾಗಿದೆ. ವರದ ಮುದ್ರೆಯೂ ಅಭಯ ಮುದ್ರೆಯೂ, ಸ್ಫಟಿಕಮಣಿಯ ಅಕ್ಷರಮಾಲೆಯೂ (ಬಟ್ಟಲೂ) ಜ್ಞಾನ ಮುದ್ರೆಯೂ (ಪುಸ್ತಕವೂ) ನಿನ್ನ ನಾಲ್ಕು ಕೈಗಳನ್ನೂ ಅಲಂಕರಿಸಿವೆ. ಇಂತಹ ನಿನ್ನನ್ನು ಒಮ್ಮೆಯಾದರೂ ನಮಸ್ಕರಿಸದಿದ್ದರೆ ಮಧುಕ್ಷೀರದ್ರಾಕ್ಷಿಗಳ ಮಾಧುರ್ಯವನ್ನು ಹೊರಹೊಮ್ಮಿಸುವ ವಾಕ್ಪ್ರವಾಹಗಳು ಹೇಗೆ ತಾನೇ ಉದ್ಭವಿಸೀತು !

16. ಕವೀನ್ದ್ರಾಣಾಂ ಚೇತಃ—P. 52.

ನವರಸಭರಿತವಾದ ವಾಣಿಯ ಪ್ರಕಾಶಕ್ಕೆ ಮೂಲವಾದ ದೇವಿಯ ಧ್ಯಾನ

(ವೇದಶಾಸ್ತ್ರಾದಿಜ್ಞಾನಲಾಭ)

ಓ ದೇವಿ ! ಮಹಾಕವಿಗಳ ಹೃದಯಕಮಲವನ್ನರಳಿಸುವ ಎಳೆಬಿಸಿಲಿನಂತೆ ಅರುಣವರ್ಣಗಳಿಂದ ನಿನ್ನನ್ನು ಯಾವ ಸಜ್ಜನರು ಭಜಿಸುವರೋ, ಅವರು ಬ್ರಹ್ಮನ ಪ್ರೇಯಸಿಯಾದ ಸರಸ್ವತಿಯ ನವಯೌವನದ ಶೃಂಗಾರ ರಸಪ್ರವಾಹದಿಂದ ಗಂಭೀರವಾದ ವಾಗ್ವಿಲಾಸವನ್ನು ಹೊಂದಿ, ಅದರ ಮೂಲಕ ಅನೇಕ ಸಹೃದಯರ ಹೃದಯಗಳನ್ನೂ ರಂಜಿಸಲು ಸಮರ್ಥರಾಗುವರು.

17. ಸವಿತ್ರೀಭಿರ್ವಾಚಾಂ—P. 54.

ಕವಿತಾಮೂಲವಾದ ದೇವಿಯ ಧ್ಯಾನ

(ಸರ್ವಕಲಾಜ್ಞಾನ)

ಓ ದೇವಿ ! ವಾಙ್ಮಯಕ್ಕೆ ತವರೂರಾದ, ಚಂದ್ರಕಾನ್ತಶಿಲಾಖಂಡದಂತೆ ಅದ್ಭುತವಾದ ಕಾನ್ತಿಯುಳ್ಳ ವಶಿನ್ಯಾದಿ ಶಕ್ತಿಗಳೊಡನೆ ಕೂಡಿದ ನಿನ್ನನ್ನು ಧ್ಯಾನಿಸು

ವವರು, ಮಹಾತ್ಮರ ಭಾವಭಂಗಿಗಳಿಂದ ಆಸ್ವಾದನೀಯವೂ, ಸರಸ್ವತಿಯ ಮುಖ ಕಮಲದ ಪರಿಮಳದಿಂದ ಭರಿತವೂ ಆದ ಮಧುರವಾದ ವಾಕ್ಕುಗಳಿಂದ ಕಾವ್ಯ ರಾಶಿಯನ್ನೇ ಹೊರಹೊಮ್ಮಿಸುವವರಾಗುತ್ತಾರೆ.

18. ತನುಚ್ಛಾಯಾಭಿಸ್ತೇ—P. 57.

ದೇವವೇಶ್ಯೆಯರನ್ನೂ ಆಕರ್ಷಿಸುವ ದೇವೀಸೌಂದರ್ಯ

(ಸಕಲಪ್ರಾಣಿವಶ್ಯತೆ)

ಓ ದೇವಿ ! ಬಾಲಸೂರ್ಯನ ಕಿರಣಗಳ ಕಾನ್ತಿಯನ್ನು ಹೊಂದಿರುವ ನಿನ್ನ ದೇಹಕಾನ್ತಿಯಿಂದ ದ್ಯಾವಾಪೃಥಿವಿಗಳೆಲ್ಲವೂ ಎಳೆಗೆಂಪು ಬಣ್ಣವುಳ್ಳದ್ದಾಗಿದೆಯೆಂದು ಯಾವನು ಧ್ಯಾನಿಸುವವನೋ, ಅವನಿಗೆ—ಹೆದರಿದ ಕಾಡುಜಿಂಕೆಯಂತೆ ಆಕರ್ಷ ಣೀಯವಾದ ಕಣ್ಣುಳ್ಳ ಊರ್ವಶೀ ಮೊದಲಾದ ದೇವವೇಶ್ಯೆಯರೂ ಸಹ ವಶರಾಗುವರು.

19. ಮುಖಂ ಬಿನ್ದುಂ ಕೃತ್ವಾ—P. 58.

ಸುಂದರಿಯರೆಲ್ಲರನ್ನೂ ಆಕರ್ಷಿಸುವ ದೇವಿಯ ಅದ್ಭುತಸೌಂದರ್ಯವರ್ಣನೆ

(ರಾಜ-ರಾಕ್ಷಸ-ಮೃಗ-ಸ್ತ್ರೀಯರ ವಶ್ಯ)

ಓ ದೇವಿ ! ಯಾವನು ವನಿತೆಯರ ಮುಖವನ್ನೇ ಬಿಂದುವಾಗಿರಿಸಿ, ಅದರ ಕೆಳಗೆ ಕುಚಗಳನ್ನೂ ಅದರ ಕೆಳಗೆ ಶಕ್ತಿರೂಪವಾದ ಯೋನಿಯನ್ನೂ ಭಾವಿಸಿ ಆ ಸ್ಥಾನಗಳಲ್ಲಿ ನಿನ್ನ ಕಾಮರಾಜ ಬೀಜವನ್ನು ಧ್ಯಾನಿಸುವನೋ ಅವನು, ಕೂಡಲೇ ಆ ವನಿತೆಯರ ಚಿತ್ತವಿಕಾರವನ್ನು ಮಾಡಬಲ್ಲನು, ಎಂಬುವುದು ಬಹಳ ಸಣ್ಣ ವಿಷಯವೇ ಸರಿ ಏಕೆಂದರೆ—ಅವನು ಸೂರ್ಯಚಂದ್ರರನ್ನೇ ಸ್ತನಗಳನ್ನಾಗಿಯುಳ್ಳ ಮೂರು ಲೋಕಗಳನ್ನೂ ಸಹ ಮೋಹಗೊಳಿಸಬಲ್ಲನಲ್ಲವೇ ?

20. ಕಿರನ್ತೀಮಙ್ಗೇಭ್ಯಃ —P. 60.

ಜ್ವರಪರಿಹಾರಕವಾದ ದೇವೀಧ್ಯಾನ

(ವಿಷಶಾನ್ತಿ, ಜ್ವರನಿವೃತ್ತಿ)

ಓ ದೇವಿ ! ನಿನ್ನ ಅಂಗಗಳ ಕಿರಣರಾಶಿಯಿಂದಲೇ ಅಮೃತರಸವನ್ನು ಚಿಮ್ಮಿಸುತ್ತಿರುವ ಚಂದ್ರಕಾನ್ತಶಿಲಾಮಯವಾದ ಪುತ್ಥಳಿಕೆಯಂತಿರುವ ನಿನ್ನನ್ನು ಯಾವನು ತನ್ನ ಹೃದಯಕಮಲದಲ್ಲಿ ಧ್ಯಾನಿಸುತ್ತಾನೆಯೋ ಅವನು — ಸರ್ಪಗಳ ಸೊಕ್ಕನ್ನು ತನ್ನ ದೃಷ್ಟಿಯಿಂದಲೇ ಅಡಗಿಸುವ ಗರುಡನಂತೆ, ಅಮೃತಧಾರೆಯನ್ನೇ ಸಿಂಪಡಿಸುವ ದೃಷ್ಟಿಯಿಂದ ಜ್ವರಪೀಡಿತರನ್ನೂ ಸುಖಪಡಿಸುವನು.

21. ತಟಿಲ್ಲೇಖಾತನ್ವೀಂ—P. 62.

ಪರಮಾನಂದವನ್ನು ಕೊಡುವ ದೇವಿಯ ಕಲೋಪಾಸನೆ

(ಸಕಲಜನವಿರೋಧಪರಿಹಾರ)

ಓ ದೇವಿ! ಷಟ್ಕಮಲಗಳ ಮೇಲಿರುವ ಸಹಸ್ರದಲಕಮಲದಲ್ಲಿ ಮಿಂಚಿ ನಂತೆ ದೀರ್ಘವಾಗಿಯೂ ಸೂಕ್ಷ್ಮವಾಗಿಯೂ ಪ್ರಭಾಮಯವಾಗಿಯೂ ಹೊಳೆಯುವ ಸೋಮಸೂರ್ಯಾಗ್ನಿ ರೂಪವಾದ ನಿನ್ನ ಕಲೆಯನ್ನು, ಕಾಮಾದಿಮಲವೂ ಅವಿ ದ್ಯಾದಿಮಾಯಾವಿಕಾರವೂ ಇಲ್ಲದ ಮನಸ್ಸಿನಿಂದ ಸಾಕ್ಷಾತ್ಕರಿಸುವ ಮಹಾತ್ಮರು, ಎಲ್ಲೆಯಿಲ್ಲದ ಮಹಾಸುಖವನ್ನು ಸದಾಕಾಲದಲ್ಲಿಯೂ ಅನುಭವಿಸುತ್ತಿರುವರು.

22. ಭವಾನಿ ತ್ವಂ ದಾಸೇ—P. 63.

ಭಗವತ್ಸಾಯುಜ್ಯವನ್ನು ಕೊಡುವ ದೇವಿಯ ಧ್ಯಾನವಿಶೇಷ

(ಸಾಮ್ರಾಜ್ಯಾದಿಸಿದ್ಧಿ)

ಭಕ್ತನೊಬ್ಬನು "ಓ ಭವಾನಿ! ನೀನು ನಿನ್ನ ದಾಸನಾದ ನನ್ನ ವಿಷಯದಲ್ಲಿ ಕರುಣಾಮಯವಾದ ಕಟಾಕ್ಷವನ್ನು ಬೀರಬೇಕು." ಇತ್ಯಾದಿಯಾಗಿ ಸ್ತುತಿಸುವ ಉದ್ದೇಶದಿಂದ "ಓ ಭವಾನಿ! ನೀನು" ಎಂದು ಅರಂಭಿಸುವಷ್ಟರಲ್ಲಿಯೇ, ಅವನಿಗೆ ನಿನ್ನ ಪಾದಗಳ ಸಾಯುಜ್ಯವನ್ನೇ ದಯಪಾಲಿಸುವೆ. ನಿನ್ನ ಪಾದಗಳಾದರೋ ವಿಷ್ಣು ಬ್ರಹ್ಮ ಮತ್ತು ಇಂದ್ರರ ಶುಭ್ರವಾದ ಕಿರೀಟ ಕಾಂತಿಯಿಂದಲೇ ನೀರಾಜನವನ್ನು ಪಡೆಯುತ್ತಿರು ವುದು.

23. ತ್ವಯಾ ಹೃತ್ವಾ ವಾಮಂ—P. 64.

ಶಕ್ತಿಸ್ವರೂಪಿಣಿಯನ್ನೂ ಶಿವಮಯವಾಗಿ ಕಾಣುವ ವಿಧಾನ.

(ಸರ್ವಾಪನ್ನಿವೃತ್ತಿ, ಋಣಪರಿಹಾರ)

ಓ ದೇವಿ! ನೀನು ಶಿವನ ಶರೀರದ ಎಡಭಾಗವನ್ನು ಮೊದಲು ಅಪ ಹರಿಸಿದೆ. ನಂತರ ಅಷ್ಟರಲ್ಲೇ ತೃಪ್ತಿಯಿಲ್ಲದೇ ಉಳಿದ ಬಲಭಾಗವನ್ನೂ ಅಪಹರಿಸಿಬಿಟ್ಟೆ- ಎಂದೇ ನಾವು ಊಹಿಸುತ್ತೇವೆ. ಏಕೆಂದರೆ—ಈ ನಿನ್ನ ರೂಪವೆಲ್ಲಾ ಎಳೆಯ ಸೂರ್ಯನ ಕಾಂತಿಯನ್ನೂ, ಮೂರು ಕಣ್ಣುಗಳನ್ನೂ, ಕುಚಗಳಭಾರದಿಂದ ನಮ್ರತೆ ಯನ್ನೂ, ವಕ್ರವಾದ ಚಂದ್ರಲೇಖೆಯಿಂದ ಕೂಡಿದ ಕಿರೀಟವನ್ನೂ ಹೊಂದಿ, ಶಿವಮಯ ವಾಗಿಯೇ ಕಾಣುತ್ತಿದೆಯಲ್ಲವೆ?

24. ಜಗತ್ ಸೂತೇ ಧಾತಾ—P. 65.

ದೇವಿಯೇ ಕ್ರಿಯಾಶಕ್ತಿಸ್ವರೂಪಿಣಿ

(ಭೂತ-ಪ್ರೇತ-ಪಿಶಾಚ-ಅಪಸ್ಮಾರಾದಿ ನಿವೃತ್ತಿ)

ಓ ದೇವಿ! ಕ್ಷಣಮಾತ್ರ ಚಲಿಸುವ ನಿನ್ನ ಭ್ರೂಲತೆಯ ಅಪ್ಪಣೆಯನ್ನು ಪಡೆದ ಸದಾಶಿವನು ಬ್ರಹ್ಮಾದಿದೇವತೆಗಳಿಗೂ ಆಯಾ ಕ್ರಿಯಾಶಕ್ತಿಯನ್ನು ದಯಪಾಲಿಸುವನು. ಆದರಿಂದಲೇ ಬ್ರಹ್ಮನು ಜಗತ್ತನ್ನು ಸೃಷ್ಟಿಸುವನು. ವಿಷ್ಣುವು ಅದನ್ನು ಪಾಲಿಸುವನು. ರುದ್ರನು ಅದನ್ನು ಸಂಹರಿಸುವನು, ಮಹೇಶ್ವರನು ಈ ಮೂವರನ್ನೂ ಉಪಸಂಹರಿಸಿ ತನ್ನ ಶರೀರವನ್ನೂ ಮರೆಸಿಕೊಳ್ಳುವವನಾಗುತ್ತಾನೆ.

25. ತ್ರಯಾಣಾಂ ದೇವಾನಾಂ—P. 66.

ದೇವಿಯ ಪೂಜೆಯೇ ತ್ರಿಮೂರ್ತಿಗಳಿಗೂ ತಲುಪುವುದು

(ಸ್ಥಾನಮಾನಲಾಭ)

ಓ ಶಿವೇ! ಭಕ್ತನು ನಿನ್ನ ಪಾದಾರವಿಂದಗಳಲ್ಲಿ ಯಾವ ಪೂಜೆಯನ್ನು ಸಲ್ಲಿಸುವನೋ ಆ ಪೂಜೆಯೇ ನಿನ್ನ ಸತ್ತ್ವರಜಸ್ತಮಸ್ಸುಗಳಿಂದ ಆವಿರ್ಭವಿಸಿದ ಬ್ರಹ್ಮ ವಿಷ್ಣು ಮಹೇಶ್ವರರಿಗೂ ಸಲ್ಲುವುವು. ಏಕೆಂದರೆ—ಇವರೆಲ್ಲರೂ ನೀನು ನಿನ್ನ ಪಾದಾರವಿಂದಗಳನ್ನು ಇಟ್ಟಿರುವ ಮಣಿಪೀಠದ ಸಮೀಪದಲ್ಲಿ ತಮ್ಮ ಶಿರಸ್ಸುಗಳ ಮೇಲೆ ಕೈಗಳನ್ನು ಜೋಡಿಸಿಕೊಂಡು ಯಾವಾಗಲೂ ನಿಂತಿರುವರಲ್ಲವೇ!

26. ವಿರಿಂಚಿಃ ಪಂಚತ್ವಂ—P. 67.

ಶಿವನ ಶಾಶ್ವತತೆ

(ಸರ್ವಸಿದ್ಧಿ, ಶತ್ರುಜಯ)

ಓ ಸತಿ! ಪ್ರಳಯಕಾಲದಲ್ಲಿ ಬ್ರಹ್ಮ ವಿಷ್ಣು ಯಮ ಕುಬೇರ ಮತ್ತು ಇಂದ್ರ ಮೊದಲಾದ ಎಲ್ಲರೂ ಕಣ್ಣುಮುಚ್ಚಿ ಮರಣವನ್ನು ಹೊಂದುವರು. ಆದರೆ ನಿನ್ನ ಪತಿಯಾದ ಸದಾಶಿವನೊಬ್ಬನೇ ಇದರ ವೇಗಕ್ಕೆ ಸಿಗದೇ ಶಾಶ್ವತವಾಗಿ ವಿಹರಿಸುತ್ತಾನೆ.

27. ಜಪೋ ಜಲ್ಪಃ ಶಿಲ್ಪಂ—P. 68.

ಎಲ್ಲ ಕರ್ಮಗಳೂ ಸೇವಾರೂಪವಾಗುವಂತೆ ಪ್ರಾರ್ಥನೆ

(ಮಂತ್ರ-ದೇವತಾ-ಆತ್ಮಗಳ ಸಿದ್ಧಿ)

ಓ ದೇವಿ ! ನನ್ನ ಸ್ವಾಭಾವಿಕವಾದ ಸಲ್ಲಾಪಗಳೆಲ್ಲವೂ ನಿನ್ನ ಜಪವಾಗಲಿ, ನನ್ನ ಹಸ್ತವಿನ್ಯಾಸಗಳೆಲ್ಲವೂ ನಿನ್ನನ್ನು ಸಂತೋಷಗೊಳಿಸುವ ಮುದ್ರೆಯಾಗಲಿ, ನನ್ನ ನಡೆಯೆಲ್ಲವೂ ನಿನ್ನ ಪ್ರದಕ್ಷಿಣೆಯಾಗಲಿ, ನನ್ನ ದೈನಂದಿನ ಆಹಾರವೆಲ್ಲವೂ ನಿನಗೆ ಅರ್ಪಿಸಬೇಕಾದ ಯಜ್ಞಹವಿಸ್ಸಾಗಲಿ. ನಾನು ಕಾಲನ್ನು ನೀಡಿ ಮಲಗುವುದೇ ನಿನ್ನ ಪ್ರಣಾಮವೂ ಆಗಲಿ. ಹೀಗೆ ಆತ್ಮಾರ್ಪಣಬುದ್ಧಿಯಿಂದ ನಾನು ಪಡುವ ಸುಖವೆಲ್ಲವೂ ನಿನ್ನ ಪೂಜೆಯ ಪರ್ಯಾಯವೇ ಆಗಲಿ.

28. ಸುಧಾಮಪ್ಯಾಸ್ವಾದ್ಯ—P. 70.

ಶಕ್ತಿಯ ಕರ್ಣಭೂಷಣದಿಂದಲೇ ಶಿವನ ಅಮೃತತ್ವ

(ಅಪಮೃತ್ಯುನಿವಾರಣಾದಿ)

ಓ ತಾಯಿ ! ಬ್ರಹ್ಮೇಂದ್ರಾದಿ ದೇವತೆಗಳೆಲ್ಲರೂ ಭಯಂಕರವಾದ ಜರಾ ಮರಣಗಳನ್ನು ಹಿಂಗಿಸುವ ಅಮೃತನನ್ನೇ ಪಾನಮಾಡಿದ್ದರೂ ಎಂದಾದರೊಂದು ದಿನ ಮೃತ್ಯುವಿಗೆ ಈಡಾಗಲೇ ಬೇಕಾಗಿದೆ. ಆದರೆ ಸದಾಶಿವನು ಮಾತ್ರ ಕಾಲಕೂಟ ವಿಷ ವನ್ನೇ ನುಂಗಿದರೂ ಎಂದೆಂದಿಗೂ ಮರಣಕ್ಕೆ ತುತ್ತಾಗಲಾರನು, ಇದು ಹೀಗಾಗಲು ನಿನ್ನ ಕರ್ಣಭೂಷಣಗಳ ಮಹಿಮೆಯೇ ಕಾರಣ.

29. ಕಿರೀಟಂ ವೈರಿಂಚಂ—P. 70.

ದೇವಿಗೆ ಸದಾಶಿವನಲ್ಲಿರುವ ಗೌರವ

(ಮೂರ್ಖವಶ್ಯತೆ)

ಓ ದೇವಿ ! ಬ್ರಹ್ಮ ವಿಷ್ಣು ಮತ್ತು ಇಂದ್ರರು ನಿನಗೆ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತಿರುವಾಗ, ಸದಾಶಿವನು ಬಂದಿದ್ದನ್ನು ತಿಳಿದು ಅವನನ್ನು ಸಡಗರದಿಂದ ಎದುರುಗೊಳ್ಳಲು ನೀನು ಏಳುವೆಯಲ್ಲವೇ ? ಆಗ "ಓ ತಾಯಿ ! "ಮುಂದೆ ಬ್ರಹ್ಮನ ಕಿರೀಟವಿದೆ, ಅದನ್ನು ದೂರಮಾಡು, ಈ ಕಡೆ ವಿಷ್ಣುವಿನ ಕಠೋರ ವಾದ ಕಿರೀಟವನ್ನು ಎಡವೀಯೆ ! ಆ ಕಡೆ ಇಂದ್ರನ ಕಿರೀಟವನ್ನು ದಾಟ ಹೋಗು." ಇತ್ಯಾದಿಯಾದ ನಿನ್ನ ಪರಿಜನರು ನಿನ್ನನ್ನು ಕುರಿತು ಹೇಳುವುದು ಎಷ್ಟು ಉತ್ತಮ ವಾದ ಭಾವವನ್ನು ಕೊಡುವ ಮಾತುಗಳಾಗಿವೆ.

30. ಸ್ವದೇಹೋದ್ಭೂತಾಭಿಃ—P. 71.

ದೇವಿಯ ಐಕ್ಯಭಾವೋಪಾಸನೆ

(ಅಣಿಮಾದ್ಯಷ್ಟಸಿದ್ಧಿ, ಪರಕಾಯಪ್ರವೇಶ, ಅಗ್ನಿಸ್ತಂಭನ)

ಓ ಶಾಶ್ವತಳೇ ! ಓ ಸಜ್ಜನಸೇವ್ಯಳೇ ! ನಿನ್ನ ದೇಹದಿಂದ ಹೊರಹೊಮ್ಮುವ ಕಾಂತಿರೂಪವಾದ ಅಣಿಮಾದಿ ಸಿದ್ಧಿಗಳಿಂದ ಸುತ್ತುವರಿಯಲ್ಪಟ್ಟ ನಿನ್ನನ್ನು, ಯಾವನು 'ನಾನು' ಎಂಬ ಐಕ್ಯಭಾವದಿಂದ ಯಾವಾಗಲೂ ಧ್ಯಾನಿಸುವನೋ, ಅವನು ಮುಕ್ಕಣ್ಣನ ಐಶ್ವರ್ಯವನ್ನೂ ಹುಲ್ಲಿನಂತೆ ಕಡೆಗಾಣಿಸುತ್ತಾನೆ. ಅಂತಹವನಿಗೆ ಪ್ರಲಯಕಾಲದ ಅಗ್ನಿಯೂ ಸಹ ಮಂಗಳನೀರಾಜನವನ್ನು ಅರ್ಪಿಸುವುದು. ಇದರಲ್ಲಿ-ಏನೂ ಅಂತಹ ಆಶ್ಚರ್ಯವಿಲ್ಲವಷ್ಟೇ.

31. ಚತುಷ್ಷಷ್ಟ್ಯಾ ತನ್ತ್ರೈಃ—P. 72.

ಪುರುಷಾರ್ಥದ ಹಾದಿಯನ್ನು ತೋರಿಸುವ ಶ್ರೀಚಕ್ರದ ಮಹಿಮೆ

(ಸಕಲಜನವಶ್ಯ, ರಾಜವಶ್ಯ)

ಓ ದೇವಿ ! ಶಿವನು ಅನೇಕ ದುಷ್ಟ ಸಿದ್ಧಿಗಳನ್ನು ಕೊಡುವ ಅರವತ್ತನಾಲ್ಕು ತಂತ್ರಗಳ ಮೂಲಕ ಲೋಕವನ್ನೆಲ್ಲಾ ವಂಚಿಸುತ್ತಿದ್ದನು. ಆದರೆ ನಿನ್ನ ನಿರ್ಬಂಧದಿಂದ ಸಮಸ್ತಪುರುಷಾರ್ಥಗಳನ್ನೂ ಈಡೇರಿಸುವ ಸಾಮರ್ಥ್ಯವನ್ನು ಸ್ವತಂತ್ರವಾಗಿ ಹೊಂದಿರುವ ಈ ನಿನ್ನ ಸತ್ಯತಂತ್ರವೊಂದನ್ನು ಭೂಮಿಗೆ ಇಳಿದು ಬರುವಂತೆ ಮಾಡಿದನು.

32. ಶಿವಃ ಶಕ್ತಿಃ ಕಾಮಃ—P. 81.

ಪಂಚದಶಾಕ್ಷರೀಮಂತ್ರೋದ್ಧಾರ

(ವಿದ್ಯಾಸಿದ್ಧಿ, ರಸಾಯನಸಿದ್ಧಿ)

ಓ ತಾಯೇ ! ಶಿವ (ಕ) ಶಕ್ತಿ (ಏ) ಕಾಮ (ಈ) ಕ್ಷಿತಿ (ಲ) ಎಂಬ ವರ್ಣಗಳುಳ್ಳ ಆಗ್ನೇಯ ಖಂಡವನ್ನೂ, ರವಿ (ಹ) ಶೀತಕಿರಣ (ಸ) ಸ್ಮರ (ಕ) ಹಂಸ (ಹ) ಶಕ್ರ (ಲ) ಎಂಬ ವರ್ಣಗಳುಳ್ಳ ಸೂರ್ಯಖಂಡವನ್ನೂ, ಪರಾ (ಸ) ಮಾರ (ಕ) ಹರಿ (ಲ) ಎಂಬ ವರ್ಣಗಳುಳ್ಳ ಸೋಮಖಂಡವನ್ನೂ, ಇವುಗಳ ಕೊನೆಯಲ್ಲಿ ರುದ್ರಗ್ರಂಥಿ-ಬ್ರಹ್ಮಗ್ರಂಥಿ-ವಿಷ್ಣುಗ್ರಂಥಿಗಳ ಸ್ಥಾನದ ಹೃಲ್ಲೇಖಾಬೀಜ ಅಂದರೆ ಹ್ರೀಂಕಾರವನ್ನೂ ಸೇರಿಸಿದರೆ ಅದು ತ್ರಿಪುರಸುಂದರಿಯಾದ ನಿನ್ನ ಪಂಚದಶಾಕ್ಷರೀಮಂತ್ರದ ಒಂದು ಪ್ರತೀಕವೇ ಆಗಿಬಿಡುತ್ತದೆ.

33. ಸ್ಮರಂ ಯೋನಿಂ ಲಕ್ಷ್ಮೀಂ—P. 88.

ದೇವೀಮಂತ್ರೋಪಾಸನೆಯ ಕ್ರಮ

(ಬಹುಧನಪ್ರಾಪ್ತಿ)

ಓ ನಿತ್ಯಳೇ! ನಿನ್ನ ಮಂತ್ರದ ಆದಿಯಲ್ಲಿ ಸ್ಮರ—ಯೋನಿ= ಭುವನೇಶ್ವರೀ—ಲಕ್ಷ್ಮೀಯರ ಬೀಜಾಕ್ಷರಗಳನ್ನು (=ಕ್ಲೀಂ-ಹ್ರೀಂ-ಶ್ರೀಂ) ಜೋಡಿಸಿ, ಎಲ್ಲೆಯಿಲ್ಲದ ನಿತ್ಯಾನಂದವನ್ನನುಭವಿಸುವ ರಸಿಕರಾದ ಯೋಗೀಶ್ವರರು, ಚಿಂತಾಮಣಿಗಳ ಸಮೂಹದಿಂದ ಅಕ್ಷಮಾಲಿಕೆಯನ್ನು ರಚಿಸಿಕೊಂಡು, ಕಾಮಧೇನುವಿನ ನೂರಾರು ಆಜ್ಯಧಾರೆಗಳಿಂದ ಶಿವಾಗ್ನಿಯಲ್ಲಿ ಹೋಮವನ್ನು ಮಾಡುತ್ತಾ, ನಿನ್ನನ್ನೇ ಭಜಿಸುತ್ತಿರುವರು.

34. ಶರೀರಂ ತ್ವಂ ಶಮ್ಭೋಃ—P. 100.

ಶಿವಶಕ್ತಿಗಳ ಐಕ್ಯವರ್ಣನೆ

(ಬುದ್ಧಿಪ್ರಾಪ್ತಿ)

ಓ ಭಗವತಿ! ಶಿವನಿಗೆ ನೀನು, ಸೂರ್ಯಚಂದ್ರರನ್ನೇ ಸ್ತನಗಳಾಗಿಯುಳ್ಳ ಶರೀರವಾಗಿರುವೆ. ನಿನ್ನ ಶರೀರವೇ ನವವ್ಯೂಹಾತ್ಮಕನಾದ ಆನಂದಭೈರವನ ಪರಿಶುದ್ಧ ಸ್ವರೂಪವಾಗಿದೆ. ಆದ್ದರಿಂದಲೇ ಆನಂದಭೈರವ-ಆನಂದಭೈರವೀಸ್ವರೂಪರಾದ ನಿಮ್ಮಿಬ್ಬರಿಗೂ ಶೇಷಶೇಷಿಭಾವವು ಬಹಳ ಸಮರಸವಾಗಿ ಹೊಂದಿಕೊಂಡಿರುವುದು.

35. ಮನಸ್ತ್ವಂ ವ್ಯೋಮ ತ್ವಂ—P. 105.

ದೇವಿಯ ತತ್ತ್ವಾತ್ಮಿಕತೆ

(ಕ್ಷಯರೋಗನಿವೃತ್ತಿ)

ಓ ದೇವಿ! ಮನಸ್ಸು, ಆಕಾಶ, ವಾಯು, ಅಗ್ನಿ, ಅಪ್ಪು, ಭೂಮಿ, ಎಂಬ ಎಲ್ಲ ತತ್ತ್ವವೂ ನೀನೇ ಆಗಿದೀಯೆ. ಇವೆಲ್ಲವೂ ನಿನ್ನಲ್ಲಿಯೇ ಲಯ ಹೊಂದಿದ ನಂತರ ಏನೂ ಇರುವುದಿಲ್ಲವಷ್ಟೇ! ಆದರೆ ಆಮೇಲೆ ನೀನೇ ಒಂದಾನೊಂದು ಕಾಲಕ್ಕೆ ನಿನ್ನನ್ನು ಜಗದ್ರೂಪಕ್ಕೆ ತಂದುಕೊಂಡು ವಿಸ್ತಾರಪಡಿಸಿಕೊಳ್ಳಲು ಶಿವಶಕ್ತಿಗಳ ರೂಪವನ್ನು ಚಿದಾನಂದರೂಪದಲ್ಲಿ ತಾಳುತ್ತೀಯಲ್ಲವೇ.

36. ತವಾಜ್ಞಾ ಚಕ್ರಸ್ಥಂ—P. 107.

ಆಜ್ಞಾ ಚಕ್ರದಲ್ಲಿ ದೇವಿಯ ಧ್ಯಾನಕ್ರಮ

(ಅನೇಕ ರೋಗ ಶಾಂತಿ)

ಓ ದೇವಿ! ನಿನ್ನ ಯಾವ ಪ್ರಭುವನ್ನು ಆರಾಧಿಸುವವನು ಸೂರ್ಯಚಂದ್ರಾಗ್ನಿಗಳಿಗೆ ವಿಷಯವಾಗದ ಮತ್ತು ಬಾಹ್ಯಪ್ರಕಾಶರಹಿತವಾದ ಅಲೌಕಿಕಪ್ರಕಾಶ ಪ್ರಪಂಚದಲ್ಲಿ ವಾಸಮಾಡುವನೋ! ಅಂತಹ ನಿನ್ನ ಆಜ್ಞಾ ಚಕ್ರದಲ್ಲಿರುವ, ಕೋಟಿ ಸೂರ್ಯಚಂದ್ರರ ಕಾಂತಿಯಿಂದಲೂ ಪರಚೈತನ್ಯದಿಂದಲೂ ಆವೃತನಾದ ಪರಶಿವನನ್ನು ಸದಾ ವಂದಿಸುತ್ತೇನೆ.

37. ವಿಶುದ್ಧೌ ತೇ—P, 108

ವಿಶುದ್ಧಿ ಚಕ್ರದಲ್ಲಿ ದೇವಿಯ ಧ್ಯಾನ

(ಬ್ರಹ್ಮರಕ್ಷೋಬಾಧಾನಿವೃತ್ತಿ)

ಓ ದೇವಿ ! ವಿಶುದ್ಧಿಚಕ್ರದಲ್ಲಿ ಶುದ್ಧವಾದ ಸ್ಫಟಿಕಶಿಲೆಯಂತೆ ಸ್ವಚ್ಛನೂ, ಆಕಾಶತತ್ತ್ವವನ್ನು ಸೃಷ್ಟಿಸುವವನೂ ಆದ ಶಿವನನ್ನೂ, ಅವನೊಂದಿಗೆ ಸರಿಸಮವಾಗಿ ಹೆಜ್ಜೆಯಿಡುತ್ತಿರುವ ದೇವಿಯನ್ನೂ ನಮಸ್ಕರಿಸುತ್ತೇನೆ. ಈ ಇಬ್ಬರಿಂದ ಹೊರ ಹೊಮ್ಮುವ ಬೆಳದಿಂಗಳಿನಂತಿರುವ ಕಾಂತಿಪುಂಜದಿಂದ ಈ ಜಗತ್ತೇ ತನ್ನ ಒಳಗಿನ ಕಗ್ಗತ್ತಲೆಯನ್ನು ಹೋಗಲಾಡಿಸಿಕೊಂಡು ಚಕೋರಪಕ್ಷಿಯಂತೆ ನಲಿಯುತ್ತದೆ ಯಲ್ಲವೇ !

38. ಸಮುನ್ಮೀಲತ್ಸಂವಿತ್—P. 109.

ಅನಾಹತಚಕ್ರದಲ್ಲಿ ದೇವಿಯ ಧ್ಯಾನ

(ಬಾಲಾರಿಷ್ಟನಿವೃತ್ತಿ)

ಓ ದೇವಿ ! ಅನಾಹತ ಚಕ್ರದಲ್ಲಿ ಅರಳಿರುವ ಹೃದಯಕಮಲದ ಮಕರನ್ದವನ್ನು ಸವಿಯುತ್ತಿರುವ ಮಹಾತ್ಮರ ಮಾನಸಸರೋವರದಲ್ಲಿ ಸಂಚರಿಸುತ್ತಿರುವುದೂ, ತನ್ನ ಇಂಚರದಿಂದ ಹದಿನೆಂಟು ವಿದ್ಯೆಗಳನ್ನೂ ಸೃಷ್ಟಿಸುವುದೂ, ನೀರಿನಿಂದ ಹಾಲನ್ನು ಬೇರ್ಪಡಿಸುವಂತೆ ಎಲ್ಲದರಲ್ಲಿಯೂ ದೋಷಗಳಿಂದ ಗುಣಗಳನ್ನು ಬೇರ್ಪಡಿಸಿ ಸವಿಯು ತ್ತಿರುವುದೂ ಆದ, ಲೋಕಾತೀತವಾದ ಆ ಹಂಸಯುಗ್ಮವನ್ನು ಭಜಿಸುತ್ತೇನೆ.

39. ತವ ಸ್ವಾಧಿಷ್ಠಾನೇ—P. 111.

ಸ್ವಾಧಿಷ್ಠಾನಚಕ್ರದಲ್ಲಿ ದೇವಿಯ ಧ್ಯಾನ

(ದುಃಸ್ವಪ್ನನಿವೃತ್ತಿ)

ಓ ತಾಯೇ ! ಸ್ವಾಧಿಷ್ಠಾನದ ಅಗ್ನಿತತ್ತ್ವವನ್ನು ಆಶ್ರಯಿಸಿರುವ ಸಂವರ್ತಾಗ್ನಿ ಯೆಂಬ ಪರಮೇಶ್ವರನನ್ನೂ, ಮಹತ್ಪದವಾಚ್ಯಳಾದ ಆ ಸಮಯೆಯನ್ನೂ ಸ್ತುತಿಸು ತ್ತೇನೆ. ಮಹಾಕ್ರೋಧವುಳ್ಳ ಆ ಪರಮೇಶ್ವರನ ದೃಷ್ಟಿಯು ಮಹದಾದಿಲೋಕಗಳೆಲ್ಲ ವನ್ನೂ ಸುಡುತ್ತಿರುವಾಗ, ದಯಾಪೂರಿತವಾದ ನಿನ್ನ ದೃಷ್ಟಿಯು ಅದಕ್ಕೆ ಶೈತ್ಯೋಪ ಚಾರವನ್ನು ಮಾಡುತ್ತಿರುವಂತಿದೆಯಲ್ಲವೇ ?

40. ತಟಿತ್ತ್ವನ್ತಂ ಶಕ್ತ್ಯಾ P. 112

ಮಣಿಪೂರಚಕ್ರದಲ್ಲಿ ದೇವಿಯ ಧ್ಯಾನ

(ಸ್ವಪ್ನದಲ್ಲಿ ಇಷ್ಟಾರ್ಥದರ್ಶನ)

ಓ ದೇವಿ ! ನಿನ್ನ ಮಣಿಪೂರಚಕ್ರದ ಎಲ್ಲಾ ಕಗ್ಗತ್ತಲೆಯನ್ನೂ ನೀಗಿಸುವ ಶಕ್ತಿಯೆಂಬ ಮಿಂಚಿನಿಂದಲೂ, ಪ್ರಕಾಶಮಾನವಾದ ನಾನಾವಿಧ ರತ್ನಾಭರಣಗಳಿಂದ ನಿರ್ಮಿತವಾದ ಇಂದ್ರಧನುಸ್ಸಿನಿಂದಲೂ ಕೂಡಿರುವ ಶ್ಯಾಮವರ್ಣನಾದ ಹರನೆಂಬ ಸೂರ್ಯನಿಂದ ಕಾದು, ಮೂರು ಲೋಕಕ್ಕೂ ಮಳೆಗರೆಸುವ ಬಣ್ಣಿಸಲಶಕ್ಯವಾದ ಕಾರ್ಮುಗಿಲೊಂದನ್ನು ಸದಾ ಭಜಿಸುತ್ತೇನೆ.

41. ತವಾಧಾರೇ ಮೂಲೇ—P. 115.

ಮೂಲಾಧಾರದಲ್ಲಿ ದೇವಿಯ ಧ್ಯಾನ

(ಉದರರೋಗನಾಶ)

ಓ ದೇವಿ ! ನಿನ್ನ ಮೂಲಾಧಾರ ಚಕ್ರದಲ್ಲಿ ಲಾಸ್ಯಾಸಕ್ತಳಾದ ಸಮಯೆಯೆಂಬ ಆನಂದಭೈರವಿಯೊಂದಿಗೆ ಶೃಙ್ಗಾರಾದಿನವರಸಭರಿತವಾದ ಅದ್ಭುತತಾಂಡವವನ್ನು ಮಾಡುತ್ತಿರುವ ಆನಂದ ಭೈರವನನ್ನು ಧ್ಯಾನಿಸುತ್ತೇನೆ. ಜಗತ್ಸೃಷ್ಟಿಗಾಗಿ ಈ ರೀತಿ ಕೂಡಿದವರಾದ ಇವರೇ ಈ ಜಗತ್ತಿನ ತಾಯಿ ತಂದೆಗಳಾಗಿರುವರಲ್ಲವೇ ?

42. ಗತೈರ್ಮಾಣಿಕ್ಯತ್ವಂ—P. 124,

ದೇವಿಯ ಕಿರೀಟ ವರ್ಣನೆ

(ಮಹೋದರವ್ಯಾಧಿನಾಶ)

ಓ ದೇವಿ ! ರತ್ನರೂಪದಲ್ಲಿ ದಟ್ಟವಾಗಿ ಹುದುಗಿಸಲ್ಪಟ್ಟ ಹನ್ನೆರಡು ಸೂರ್ಯರಿಂದ ಕೂಡಿದ ನಿನ್ನ ಚಿನ್ನದ ಕಿರೀಟವನ್ನು ವರ್ಣಿಸಲನುವಾಗುವವನು, ಮೊದಲು ಆ ರತ್ನಕಾನ್ತಿಯ ವ್ಯಾಪ್ತಿಯಿಂದ ಚಿತ್ರ ವಿಚಿತ್ರವಾಗಿ ಕಾಣುವ ಅಲ್ಲಿನ ಚಂದ್ರ ಖಂಡವನ್ನು ನೋಡಿ, ಕಾಮನ ಬಿಲ್ಲೆಂದೇ ಭಾವಿಸುವನಲ್ಲವೇ ?

43. ಧುನೋತು ಧ್ವಾನ್ತಂ ನಃ—P. 124

ಕೇಶಪಾಶಗಳ ವರ್ಣನೆ

(ಸಕಲಜನವಶ್ಯತೆ)

ಓ ದೇವಿ ! ಅರಳಿದ ಕನ್ನೈದಿಲೆ ಹೂಗಳ ಗೊಂಚಲಿನಂತೆ ದಟ್ಟವೂ ಸ್ನಿಗ್ಧವೂ ನುಣುಪೂ ಮೃದುವೂ ಆದ ನಿನ್ನ ಕೇಶಪಾಶವು ನಮ್ಮ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಲಿ. ಇಂದ್ರನ ನಂದನೋದ್ಯಾನದ ಕಲ್ಪವೃಕ್ಷದ ಹೂಗಳೆಲ್ಲವೂ ನಿನ್ನ ಈ ಕೇಶಪಾಶದಲ್ಲಿರುವ ಸ್ವಾಭಾವಿಕವಾದ ಪರಿಮಳವನ್ನು ಹೊಂದುವುದಕ್ಕಾಗಿಯೇ ಈ ನಿನ್ನ ಕೇಶಪಾಶಗಳಲ್ಲಿಯೇ ವಾಸಿಸುತ್ತಿರಬಹುದೆಂದು ತಿಳಿಯಬೇಕಾಗಿದೆಯಲ್ಲವೇ ?

## 44. ತನೋತು ಕ್ಷೇಮಂ ನಃ—P. 127

### ಬೈತಲೆಯ ವರ್ಣನೆ

(ವಶ್ಯತೆ, ಮತ್ತು ಬಾಧೆಗಳ ಪರಿಹಾರ)

ಓ ದೇವಿ ! ನಿನ್ನ ಯಾವ ಬೈತಲೆಯ ರೇಖೆಯು ನಿನ್ನ ಮುಖಸೌಂದರ್ಯದ ಅಲೆಗಳ ಪ್ರವಾಹದ ಹಾದಿಯೋ ಎಂಬಂತಿದೆಯೋ, ಮತ್ತು ದಟ್ಟವಾದ ಕೇಶಪಾಶ ರೂಪದಲ್ಲಿ ಕಾಣುವ ಕಗ್ಗತ್ತಲೆಯೆಂಬ ಶತ್ರುಗಳಿಂದ ಸೆರೆಹಿಡಿಯಲ್ಪಟ್ಟ ಸೂರ್ಯನ ಎಳೆಬಿಸಿಲಿನಂತೆ ಕಾಣುವ ಸಿಂಧೂರದಿಂದ ಅಲಂಕರಿಸಲ್ಪಟ್ಟಿದೆಯೋ, ಅಂಥಾ ನಿನ್ನ ಬೈತಲೆಯ ರೇಖೆಯು ನಮ್ಮೆಲ್ಲರಿಗೂ ಕ್ಷೇಮವನ್ನುಂಟುಮಾಡಲಿ.

## 45. ಅರಾಳೈ: ಸ್ವಾಭಾವ್ಯಾತ್ —P. 128

### ಮುಖಕಮಲವರ್ಣನೆ

(ವಾಕ್‌ಸಿದ್ಧಿ)

ಓ ದೇವಿ ! ಸ್ವಾಭಾವಿಕವಾಗಿಯೋ ಕುಟಿಲವಾಗಿಯೂ ಮರಿದುಂಬಿಗಳಂತೆ ಕಪ್ಪಾದ ಕಾಂತಿಯುಳ್ಳವುಗಳಾಗಿಯೂ ಇರುವ ಮುಂಗುರುಳುಗಳಿಂದ ಸುತ್ತುವರಿದ ನಿನ್ನ ಮುಖಮಂಡಲವು ಕಮಲದ ಕಾಂತಿಯನ್ನೂ ಪರಿಹಾಸಮಾಡುವಂತಿದೆ. ಹಾಗೆಯೇ ನೀನು ಮುಗುಳ್ನಗೆ ನಗುವಾಗ ಪ್ರಕಾಶಿಸುವ ಹಲ್ಲುಗಳ ಕಾನ್ತಿಯೆಂಬ ಕೇಸರಗಳಿಂದ ಕೂಡಿ ಪರಿಮಳಭರಿತವಾದ ಆ ನಿನ್ನ ಮುಖಮಂಡಲದಲ್ಲಿಯೇ ಕಾಮ ದಹನವೆಸಗಿದ ಶಿವನ ಹಣೆಗಣ್ಣೆಂಬ ದುಂಬಿಗಳೂ ಆನಂದಪಡುವಂತಿದೆ.

## 46. ಲಲಾಟಂ ಲಾವಣ್ಯ—P. 129

### ಹಣೆಯ ವರ್ಣನೆ

(ಭರ್ತೃ ಸಮಾಗಮ, ಗರ್ಭಧಾರಣೆ)

ಓ ದೇವಿ ! ಯಾವ ನಿನ್ನ ಮುಖಮಂಡಲವು ತನ್ನದೇ ಆದ ಲಾವಣ್ಯದ ಪ್ರಕಾಶ ದಿಂದ ಶುಭ್ರವಾಗಿ ಹೊಳೆಯುತ್ತದೆಯೋ, ಅದನ್ನೇ ನಾನು—ಕಿರೀಟಾಲಂಕೃತವಾದ ಎರಡನೆಯ ಚಂದ್ರಾರ್ಧಖಂಡವೆಂದು ಭಾವಿಸುತ್ತೇನೆ. ಏಕೆಂದರೆ—ನಿನ್ನ ಚೂಡೆಗೆ ಅಲಂಕಾರವಾದ ಚಂದ್ರಕಲೆ ಮತ್ತು ಈ ಮುಖಚಂದ್ರಖಂಡ ಇವೆರಡರ ವಿಲಕ್ಷಣವಾದ ಒಂದು ಜೋಡಣೆಯಿಂದ ಅಮೃತಧಾರೆಯನ್ನು ಸುರಿಸುವ ಪೂರ್ಣಚಂದ್ರನ ಒಂದು ಆಕಾರವೇ ತೋರುವುದಾಗಿದೆಯಲ್ಲವೇ ?

47. ಭ್ರುವೌ ಭುಗ್ನೇ—P. 131

ಹುಬ್ಬುಗಳ ವರ್ಣನೆ

(ದೇವತಾವಶ್ಯ, ಸಕಲಜನವಶ್ಯ)

ಓ ಉಮೇ ! ಲೋಕದ ಎಲ್ಲವಿಧವಾದ ಭಯವನ್ನೂ ನಾಶಮಾಡುವುದರಲ್ಲಿ ನಿರತಳಾದವಳೇ ! ಕೊಂಚ ಬಾಗಿರುವ ನಿನ್ನ ಹುಬ್ಬುಗಳನ್ನು ನಾನು ಮನ್ಮಥನಬಿಲ್ಲೆಂದೇ ತಿಳಿಯುತ್ತೇನೆ. ಅಲ್ಲಿ ದುಂಬಿಗಳಂತಿರುವ ನಿನ್ನ ಕಣ್ಣುಗಳೇ ಹೆದೆ. ಅದರ ಮಧ್ಯ ಭಾಗವು, ಧನುರ್ಧಾರಿಯಾದ ಮನ್ಮಥನ ಬಲಗೈಯಿನ ಮಣಿಕಟ್ಟನಿಂದಲೂ ಮುಷ್ಟಿ ಯಿಂದಲೂ ಮರೆಸಲ್ಪಟ್ಟಿರುವಂತೆ ತೋರುತ್ತದೆ.

48. ಅಹಃ ಸೂತೇ ಸವ್ಯಂ —P. 133

ನೇತ್ರಗಳ ವರ್ಣನೆ

(ನವಗ್ರಹದೋಷಶಾನ್ತಿ)

ಓ ದೇವಿ ! ನಿನ್ನ ಬಲಗಣ್ಣು ಸೂರ್ಯರೂಪವಾಗಿ ಹಗಲನ್ನೂ, ಎಡಗಣ್ಣು ಚಂದ್ರರೂಪವಾಗಿ ರಾತ್ರಿಯನ್ನೂ, ಮತ್ತು ಹಣೆಗಣ್ಣು ಸ್ವಲ್ಪ ಅರಳಿರುವ ತಾವರೆ ಯಂತೆ ಕೆಂಪಾಗಿ (ಅಗ್ನಿ ರೂಪವಾಗಿ) ಹಗಲು ರಾತ್ರಿಗಳ ಮಧ್ಯದಲ್ಲಿ ತೋರುವ ಸಂಧ್ಯಾಕಾಲವನ್ನೂ ಸೃಷ್ಟಿಸುತ್ತವೆ.

49. ವಿಶಾಲಾ ಕಲ್ಯಾಣೀ—P. 134

ಕಟಾಕ್ಷವರ್ಣನೆ

(ನಿಧಿ ದರ್ಶನ)

ಓ ದೇವಿ ! ನಿನ್ನ ಕಣ್ಣು ಮತ್ತು ದೃಷ್ಟಿಗಳು ಅಗಲವಾಗಿರುವುದರಿಂದ ವಿಶಾಲಾ ಎಂದೂ, ಮಂಗಳಮಯವಾದ್ದರಿಂದ ಕಲ್ಯಾಣೀ ಎಂದೂ, ಸ್ಫುಟವಾದ ಕಾನ್ತಿ ಯೊಂದಿಗೆ ನೈದಿಲೆಗಳಿಂದಲೂ ಗೆಲ್ಲಲಸಾಧ್ಯವಾದ್ದರಿಂದ ಅಯೋಧ್ಯಾ ಎಂದೂ, ಹೀಗೆಯೇ ಕರುಣಾರಸಪ್ರವಾಹಕ್ಕೆ ಆಧಾರವಾಗಿಯೂ, ಅವ್ಯಕ್ತ ಮಧುರವಾಗಿಯೂ, ದೀರ್ಘವಾಗಿಯೂ, ಭಕ್ತರ ರಕ್ಷಣೆಯನ್ನು ನೀಡುವುದಾಗಿಯೂ, ಎಲ್ಲಾ ನಗರಗಳ ಪೂರ್ಣಧರ್ಮವನ್ನು ಹೊಂದಿ ಗೆಲ್ಲುವುದಾಗಿಯೂ ಇರುವುದರಿಂದ ಕ್ರಮವಾಗಿ— ಧಾರಾ-ಮಧುರಾ-ಭೋಗವತೀ-ಅವಂತೀ-ವಿಜಯಾ-ಎಂದೂ ಹೆಸರುಗಳನ್ನು ಹೊಂದಿ ಎಲ್ಲೆಲ್ಲಿಯೂ ಬೆಳಗುತ್ತಿವೆ.

50. ಕವೀನಾಂ ಸಂದರ್ಭ—P. 135

ಹಣೆಗಣ್ಣಿನ ವರ್ಣನೆ

(ಮಸೂರಿಕಾರೋಗನಾಶ)

ಓ ದೇವಿ ! ಕವಿಗಳ ಕಾವ್ಯರಾಶಿಯೇ ನವರಸಗಳನ್ನು ಸುರಿಸುವ ಒಂದು ರೀತಿಯ ಹೂಗೊಂಚಲು, ಅದರ ಮಕರಂದ ರಸವನ್ನು ನಿನ್ನ ಕಿವಿಗಳು ಸದಾ ಪಾನಮಾಡುತ್ತಿವೆ. ನಿನ್ನ ಕಡೆಗಣ್ಣುಗಳಾದರೋ. ಅವುಗಳನ್ನು ಯಾವಾಗಲೂ ಮರಿದುಂಬಿಗಳಂತೆ ಆಶ್ರಯಿಸಿ ಅಲ್ಲಿರುವ ನವರಸಗಳನ್ನೂ ಸವಿಯಲು ಹಂಬಲಿಸುತ್ತಿವೆ. ಪ್ರಾಯಶಃ ಇದನ್ನು ಗಮನಿಸಿಯೇ ನಿನ್ನ ಹಣೆಗಣ್ಣು ಅಷ್ಟು ಕೆಂಪಾಗಿರಬಹುದೆಂದು ಭಾವಿಸುತ್ತೇನೆ.

51. ಶಿವೇ ಶೃಙ್ಗಾರಾದ್ರ್ರಾ—P. 137

ನವರಸಮಯವಾದ ನೋಟದ ವರ್ಣನೆ

(ಸರ್ವಜನವಶ್ಯತೆ)

ಓ ದೇವಿ ! ನಿನ್ನ ದೃಷ್ಟಿಯು ನಾನಾವಿಷಯಗಳಲ್ಲಿ ನಾನಾವಿಧ ರಸಭಾವಗಳನ್ನು ತಾಳುತ್ತಿದೆಯೆಂದರೆ ಅತ್ಯುಕ್ತಿಯಲ್ಲ. ಏಕೆಂದರೆ—ಇದು ಶಿವನಲ್ಲಿ ಶೃಂಗಾರವನ್ನೂ, ತಾವರೆಗಳಲ್ಲಿ ರಾಗ—ರಕ್ತಿಮೆಯಿಂದ ವೀರರಸವನ್ನೂ, ನನ್ನಲ್ಲಿ ಕರುಣರಸವನ್ನೂ, ಶಿವನ ಚರಿತೆಗಳಲ್ಲಿ ಅದ್ಭುತರಸವನ್ನೂ, ಸಖಿಯರಲ್ಲಿ ಹಾಸ್ಯರಸವನ್ನೂ, ಸರ್ಪಾಭರಣಗಳಲ್ಲಿ ಭಯಾನಕರಸವನ್ನೂ, ಭಗವದ್ಧರ್ಮವಿಮೂರರಲ್ಲಿ ಬೀಭತ್ಸರಸವನ್ನೂ, ಮತ್ತು ಸವತಿಯಾದ ಗಂಗೆಯಲ್ಲಿ ರೌದ್ರರಸವನ್ನೂ, ಹೀಗೆ ಎಲ್ಲ ರಸಗಳನ್ನೂ ಸುಸ್ಪಷ್ಟವಾಗಿ ತಾಳುವುದಾಗಿದೆಯಲ್ಲವೇ ?

52. ಗತೇ ಕರ್ಣಾಭ್ಯರ್ಣಂ --P. 138

ನೇತ್ರದೈರ್ಘ್ಯವರ್ಣನೆ

(ಕಿವಿ ಕಣ್ಣುಗಳ ರೋಗ ನಿವೃತ್ತಿ)

ಓ ಹಿಮವಂತನ ವಂಶಕ್ಕೆ ಶಿರೋಲಂಕಾರವಾದ ಮೊಗ್ಗಿನಂತಿರುವವಳೇ ! ದೇವಿ ! ನಿನ್ನ ಈ ಎರಡು ಕಣ್ಣುಗಳೂ ಬಾಣದ ಹಿಂಭಾಗದ ಗರಿಗಳಂತಿರುವ ರೆಪ್ಪೆಗಳನ್ನು ಧರಿಸಿ ಕಿವಿಯವರೆಗೂ ಹರಡಿವೆ. ಇವನ್ನು ನೋಡಿದರೆ—ತ್ರಿಪುರ ಸಂಹಾರಕನಾದ ಶಿವನ ಮನಶ್ಶಾನ್ತಿಯನ್ನು ಕದಲಿಸಿತಪೋಭಂಗಮಾಡಲು ಕಿವಿಯವರೆಗೂ ಎಳೆದು ಸಿದ್ಧಪಡಿಸಿದ ಕಾಮಬಾಣದ ಸೊಬಗಿನ ನೆನೆಪನ್ನೇ ತರುತ್ತವೆ.

53. ವಿಭಕ್ತತ್ರೈವರ್ಣ್ಯಂ—P. 139

ಕಣ್ಣಿನ ಬಣ್ಣಗಳ ವರ್ಣನೆ

(ದೀಪಜ್ವಾಲಾವಶೀಕರಣ)

ಓ ಶಿವಪ್ರಿಯೆಯಾದ ದೇವಿ ! ನೀನು ವಿಲಾಸಕ್ಕೋಸ್ಕರ ನಿನ್ನ ಮೂರು ಕಣ್ಣುಗಳಿಗೂ ಕಾಡಿಗೆಯನ್ನು ಹಚ್ಚುತ್ತೀಯೆ. ಕಣ್ಣುಗಳೂ ಸಹ ಕ್ರಮವಾಗಿ ಬಿಳಿಪು ಕೆಂಪು ಕಪ್ಪು ಎಂಬ ಮೂರು ಬಣ್ಣಗಳನ್ನು ಹೊಂದಿವೆ. ಇವನ್ನು ನೋಡಿದರೆ—ಮಹಾಪ್ರಳಯ ಕಾಲದಲ್ಲಿ ತನ್ನ ಮೂಲದಲ್ಲೇ ಲೀನರಾದ ಬ್ರಹ್ಮ ವಿಷ್ಣು ಮಹೇಶ್ವರರನ್ನು ಮತ್ತೆ ಸೃಷ್ಟಿಸಲು ಬೇಕಾದ ಸತ್ತ್ವ ರಜಸ್ತಮೋಗುಣಗಳನ್ನು ಧರಿಸಿವೆಯೋ ಎಂಬಂತೆ ಕಾಣುತ್ತವೆ.

54. ಪವಿತ್ರೀಕರ್ತುಂ ನಃ—P. 141.

ಕಣ್ಣಿನ ಬಣ್ಣಗಳ ವರ್ಣನೆ

(ಯೋನಿರೋಗನಾಶ)

ಓ. ಈಶ್ವರನಿಗೇ ಪರತಂತ್ರವಾದ ಮನೋಧರ್ಮವುಳ್ಳವಳೇ ! ದೇವಿ ! ಮತ್ತೊಂದು ದೃಷ್ಟಿಯಿಂದ ನೋಡುವುದಾದರೆ— ದಯೆಯಿಂದ ಆರ್ದ್ರವಾದ, ಕೆಂಪು ಬಿಳಿಪು ಮತ್ತು ಕಪ್ಪು ಬಣ್ಣಗಳಿಂದ ಕೂಡಿದ ನಿನ್ನ ಮೂರು ಕಣ್ಣುಗಳ ಮೂಲಕ ಶೋಣಾ ಗಂಗಾ ಯಮುನೆಗಳ ಸಂಗಮವನ್ನೇ ನೀನು ಚಿತ್ರಿಸುತ್ತೀಯೆ. ಇದು ಕೇವಲ ನಮ್ಮಗಳ ಪವಿತ್ರತೆಗಾಗಿ ಎಂಬುದೇ ನಿಜವಾದ ವಿಷಯ.

55. ನಿಮೇಷೋನ್ಮೇಷಾಭ್ಯಾಂ—P. 142

ದೇವಿಯ ಕಣ್ಣು ಮುಚ್ಚುವಿಕೆ ಮತ್ತು ತೆರೆಯುವಿಕೆಗಳ ವರ್ಣನೆ

(ಅಂಡವ್ಯಾಧಿನಾಶ)

ಓ ಪಾರ್ವತಿ ! ನೀನು ಕಣ್ಣುಮುಚ್ಚಿದರೇ ಪ್ರಳಯ, ಕಣ್ಣು ತೆರೆದರೆ ಸೃಷ್ಟಿ ಎಂದು ಸಜ್ಜನರು ತಿಳಿಸುತ್ತಾರೆ. ಆದ್ದರಿಂದ ನೀನು ಒಂದಾನೊಂದು ಕಾಲದಲ್ಲಿ ಕಣ್ಣನ್ನು ತೆರೆದು ಸೃಷ್ಟಿಸಿದ ಈ ಜಗತ್ತನ್ನು ಘೋರಪ್ರಳಯದ ಭಯಂಕರತೆಯಿಂದ ಕಾಪಾಡಲೋಸುಗವೇ ಈ ರೀತಿ ಕಣ್ಣುಗಳನ್ನು ಯಾವಾಗಲೂ ತೆರೆದಿದೀಯೆ ಎಂದೇ ನಾನು ಭಾವಿಸುತ್ತೇನೆ.

56. ತವಾಪರ್ಣೇ—P. 143

ನೇತ್ರಗಳ ಸೌಭಾಗ್ಯ ವರ್ಣನೆ

(ದ್ವಾರಪಾಲಕನ ಕಣ್ಮರೆ, ತಾನಾಗಿಯೇ ಬಾಗಿಲು ತೆರೆಯುವುದು)

ಓ ದೇವಿ ! ನಿನ್ನ ನೇತ್ರ ಸೌಭಾಗ್ಯವನ್ನು ಅಪಹರಿಸಲು ಸಿದ್ಧವಾಗಿವೆಯೆಂಬ ಚಾಡಿಯನ್ನು ಆಕರ್ಣಾನ್ತವಾದ ನಿನ್ನ ಕಣ್ಣು ನಿನ್ನ ಹತ್ತಿರ ಎಲ್ಲಿ ಹೇಳಿಬಿಡುತ್ತದೆಯೋ ? ಎಂಬ ಭಯದಿಂದ ಹೆಣ್ಣು ಮೀನುಗಳು ಯಾವಾಗಲೂ ನೀರಿನಲ್ಲೇ ಮುಳುಗಿವೆ, ಮತ್ತು ಈ ಕಣ್ಣುಗಳ ಕಾನ್ತಿಯು-ಬೆಳಗ್ಗೆಯಾದ ತತ್‍ಕ್ಷಣ ದಳಗಳೆಂಬ ತಮ್ಮ ಬಾಗಿಲುಗಳನ್ನು ಮುಚ್ಚಿಕೊಂಡು ಮೊಗ್ಗಾಗುವ ಕನ್ನೈದಿಲೆ ಹೂವುಗಳನ್ನು ತ್ಯಜಿಸಿ, ರಾತ್ರಿಕಾಲದಲ್ಲಿ ಮಾತ್ರ ಅವುಗಳನ್ನು ತೆರೆದು ಪ್ರವೇಶಿಸುತ್ತವೆ.

57. ದೃಶಾ ದ್ರಾಘೀಯಸ್ಯಾ—P. 144

ದೇವಿಯ ಕೃಪಾಕಟಾಕ್ಷ ಪ್ರಾರ್ಥನೆ

(ಬಹುಭಾಗ್ಯಲಾಭ)

ಓ ದೇವಿ ! ಸ್ವಲ್ಪ ಅರಳಿದ ಕನ್ನೈದಿಲೆ ಹೂವಿನ ಕಾನ್ತಿಯಿಂದ ಕೂಡಿರುವ ನಿನ್ನ ದೀರ್ಘವಾದ ನೋಟದಿಂದ ದಯೆಯಿಟ್ಟು ದೀನನಾದ ನನ್ನನ್ನು ಸ್ನಾನಮಾಡಿಸು. ಇಷ್ಟೇ ನನ್ನ ಧನ್ಯತೆಗೆ ದಾರಿ. ಇದರಿಂದ ನಿನಗೂ ಏನೂ ನಷ್ಟವಿಲ್ಲವಷ್ಟೇ. ಏಕೆಂದರೆ ಶುಭ್ರವಾದ ಅಂತಃಕರಣವುಳ್ಳ ಮಹಾತ್ಮರಿಗೆ ಎಲ್ಲರಲ್ಲಿಯೂ ಸಮಸಹಜತೆಯಿಂದ ವರ್ತಿಸುವುದೇ ಸ್ವಭಾವವಲ್ಲವೇ ? ಚಂದ್ರನು ತನ್ನ ಚಂದ್ರಿಕೆಯನ್ನು ಕಾಡಿನಲ್ಲಿಯೂ ಉಪ್ಪರಿಗೆಯಲ್ಲಿಯೂ ಸಮವಾಗಿಯೇ ಚೆಲ್ಲುತ್ತಾನಲ್ಲವೇ ?

58. ಅರಾಲಂ ತೇ—P. 145

ಪಾಲಿಗಳ ವರ್ಣನೆ

(ಸಕಲಜನವಶ್ಯತೆ, ಸರ್ವವ್ಯಾಧಿನಾಶ)

ಓ ದೇವಿ ! ನಿನ್ನ ಕಿವಿ ಮತ್ತು ಕಣ್ಣುಗಳ ಬಗ್ಗಿರುವ ಮಧ್ಯಭಾಗವನ್ನು ಗಮನಿಸಿದರೆ ಯಾರಿಗಾದರೂ ಕಾಮನ ಬಿಲ್ಲಿನ ನೆನೆಪು ಬಂದೇ ಬರುವುದು. ಏಕೆಂದರೆ— ಅಲ್ಲಿ ಅಡ್ಡಲಾಗಿ ಸಂಚರಿಸುತ್ತಿರುವ ಕಡೆಗಣ್ಣೋಟದ ಕಾಂತಿಯು ಕಿವಿಯ ಹಾದಿಯನ್ನೂ ದಾಟಿ ಹಾದು ಮುಂದುವರಿಯುವ ಬಾಣದ ನೆನಪನ್ನೇ ತರುವುದಲ್ಲವೇ ?

59. ಸ್ಫುರದ್ಗಣ್ಡಾಭೋಗ—P. 146

ಬೆಂಡೋಲೆಗಳ ವರ್ಣನೆ

(ಸಕಲಜನವಶ್ಯತೆ)

ಓ ದೇವಿ ! ನಿನ್ನ ಕಿವಿಯ ಓಲೆಗಳು ಎರಡು ಕೆನ್ನೆಗಳಮೇಲೂ ಪ್ರತಿಬಿಂಬಿಸುತ್ತಿರುವುದರಿಂದ ನಿನ್ನ ಮುಖವು, ನಾಲ್ಕು ಚಕ್ರವುಳ್ಳ ಮನ್ಮಥರಥವನ್ನೇ ಚಿತ್ರಿಸುವಂತಿದೆ. ಪ್ರಾಯಶಃ ಈ ರಥವನ್ನೇರಿ ಮಹಾವೀರನಾದ ಕಾಮದೇವನು, ಸೂರ್ಯಚಂದ್ರರನ್ನೇ ಪಾದಗಳನ್ನಾಗಿಯುಳ್ಳ ಭೂಮಿಯೆಂಬ ರಥವನ್ನೇರಿ ಜಗತ್ತನ್ನು ಗೆಲ್ಲಲು ಅಣಿಮಾಡಿಕೊಂಡಿರುವ ಈಶ್ವರನನ್ನೂ ನೋಯಿಸಬಹುದಲ್ಲವೇ ?

60. ಸರಸ್ವತ್ಯಾಃ ಸೂಕ್ತೀಃ—P. 147

ಮಧುರಾಲಾಪವರ್ಣನೆ

(ಸಕಲವಿದ್ಯಾಲಾಭ)

ಓ ದೇವಿ ! ಅಮೃತರಸಪ್ರವಾಹದ ಅದ್ಭುತಸೌಭಾಗ್ಯವನ್ನೂ ಕೀಳುಮಾಡುವಷ್ಟು ಉತ್ತಮವಾದ ನಿನ್ನ ಮಧುರಮಧುರವಾದ ಆಲಾಪಗಳನ್ನು ಸರಸ್ವತಿಯು ಅನವರತವೂ ತನ್ನ ಕಿವಿಯೆಂಬ ಅಂಜಲಿಯಿಂದ ಸವಿಯುತ್ತಿದ್ದಾಳೆ. ಅದರ ಚಮತ್ಕಾರಕ್ಕೆ ತಲೆದೂಗುತ್ತಿರುವಾಗ ಆಕೆಯ ಕರ್ಣಾಭರಣಗಳ ಝಣತ್ಕಾರವು ನಿನ್ನ ಮಾತುಗಳನ್ನು ತಾರಸ್ಥಾಯಿಯ ಓಜ್ಕಾರದಿಂದ ಅನುಮೋದಿಸುತ್ತಿದೆಯೋ ಎನ್ನುವಂತಿದೆ.

61. ಅಸೌ ನಾಸಾವಂಶ :—P. 148.

ನಾಸಾಪುಟ ವರ್ಣನೆ

(ಸಕಲಪುರುಷವಶ್ಯತೆ)

ಹಿಮವಂತನ ವಂಶಕ್ಕೆ ಪತಾಕೆಯಂತಿರುವವಳೇ! ದೇವಿ! ಯಾವ ನಿನ್ನ ಮೂಗೆಂಬ ವಂಶವು (ಬಿದಿರು) ತನ್ನೊಳಗೆ ಅದೆಷ್ಟೋ ಮುತ್ತುಗಳನ್ನು ಅಡಗಿಸಿಕೊಂಡು, ಚಂದ್ರನಾಡಿಯೆಂಬ ತನ್ನ ಎಡಭಾಗದ ಹೊಳ್ಳೆಯ ಉಸಿರಾಟದ ಮೂಲಕ ಒಂದೊಂದು ಮುತ್ತನ್ನಾಗಿ ಹೊರತರುತ್ತಾ ಹೊರಗೂ ಮುಕ್ತಾಧರವಾಗಿದೆಯೋ, ಎನ್ನುವಂತಿದೆ. ಅಂತಹ ನಿನ್ನ ನಾಸಾವಂಶವು ನಮ್ಮ ಜೀವಕ್ಕೆ ಉಚಿತವಾದ ಇಷ್ಟಾರ್ಥವನ್ನು ದಯಪಾಲಿಸಲಿ.

62. ಪ್ರಕೃತ್ಯಾರಕ್ತಾಯಾ :—P. 149.

ತುಟಿಗಳ ವರ್ಣನೆ

(ನಿದ್ರಾಲಾಭ)

ಉತ್ತಮವಾದ ದಂತಪಂಕ್ತಿಯಿಂದ ವಿರಾಜಿಸುವವಳೇ ! ದೇವಿ ! ಸಹಜವಾಗಿಯೇ ನಸುಗೆಂಪಾಗಿರುವ ನಿನ್ನ ತುಟಿಗಳ ಕಾಂತಿಗೆ ಹೋಲಿಕೆಯನ್ನು ಒಂದು ರೀತಿ

ಯಲ್ಲಿ ಹೇಳಲೇ ? ನೋಡು, ಈ ಹವಳದ ಬಳ್ಳಿಗೂ ಏನಾದರೂ ಒಂದು ಫಲವು ಬಿಡುವುದಾದರೆ ಅದು ಇದಕ್ಕೆ ಹೋಲಬಹುದು. ತೊಂಡೆಯ ಹಣ್ಣೂ ಸಹ ನಿನ್ನ ಕೆಂಪು ತುಟಿಗಳ ಪ್ರತಿಬಿಂಬನದಿಂದಲೇ ಅಷ್ಟು ಕೆಂಪಾಗಿರುವುದು. ಹೀಗಿರುವಾಗ ಕಲಾ ಮಾತ್ರವಾದರೂ ಇದರ ಹೋಲಿಕೆಯನ್ನು ಹೊಂದಿರುವುದಾಗಿ ತೋರಿಸಿಕೊಳ್ಳಲು ಅದಕ್ಕೆ ನಾಚಿಕೆಯಾಗುವುದಿಲ್ಲವೇ ?

63. ಸ್ಮಿತಜ್ಯೋತ್ಸ್ನಾಜಾಲಂ—P. 150.

ವದನ ಬಿಂಬವರ್ಣನೆ

(ತಾನು ಹೇಳಿದ್ದನ್ನು ಎಲ್ಲರಿಂದಲೂ ಆಚರಿಸಿಸುವುದು)

ಓ ದೇವಿ ! ನಿನ್ನ ಮುಖಚಂದ್ರನ ಮುಗುಳ್ನಗೆಯೆಂಬ ಚಂದ್ರಿಕೆಯನ್ನು ಯಥೇಚ್ಛವಾಗಿ ಪಾನಮಾಡಿ ಅದರ ಮಿತಿಮೀರಿದ ಮಾಧುರ್ಯದಿಂದ ಚಕೋರ ಪಕ್ಷಿಗಳ ನಾಲಿಗೆಯೆಲ್ಲವೂ ಜಡವಾಗಿಬಿಟ್ಟವು. ಇನ್ನು ಇದಕ್ಕೆ ಬೇಸತ್ತ ಅವು, ಹುಳಿಯಲ್ಲಿ ಸ್ವಲ್ಪ ಆಸೆಗೊಂಡು ಹುಳಿಹಣ್ಣಿನ ಭ್ರಾನ್ತಿಯಿಂದ ಚಂದ್ರನನ್ನು ಕಂಡು ಅದರ ರಸವೆಂದು ಚಂದ್ರಿಕೆಯನ್ನು ಪ್ರತಿರಾತ್ರಿಯೂ ಸ್ವಚ್ಛಂದವಾಗಿ ತೃಪ್ತಿಯಾಗಿ ಆಸ್ವಾದಿಸುತ್ತಿರಬಹುದಲ್ಲವೇ ?

64. ಅವಿಶ್ರಾನ್ತಂ ಪತ್ಯುಃ—P. 151.

ಓ ಮಾತೇ ! ನಿನ್ನ ಈ ನಾಲಿಗೆಯು ಯಾವಾಗಲೂ ಸದಾಶಿವನ ಕಥೆಯನ್ನು ಜಪಿಸುತ್ತಿರುವುದರಿಂದ ಜಪಾಕುಸುಮದ(ಕೆಂಪುದಾಸವಾಳ) ಹೂವಿನ ಕಾನ್ತಿಯೇ ನಿನ್ನ ನಾಲಗೆಯಲ್ಲಿ ಕಾಣುತ್ತಿರುವುದು. ಆದ್ದರಿಂದಲೇ ನಿನ್ನ ಜಿಹ್ವಾಗ್ರದಲ್ಲಿ ನೆಲೆಸಿರುವ ಸ್ಫಟಿಕ ಸ್ವಚ್ಛಳಾದ ಸರಸ್ವತಿಯು ಮಾಣಿಕ್ಯಮೂರ್ತಿಯಂತೆ ತೋರುತ್ತಿದಾಳೆ.

65. ರಣೇ ಜಿತ್ವಾ ದೈತ್ಯಾನ್—P. 152.

ತಾಮ್ಬೂಲದ ಪವಿತ್ರತಾವರ್ಣನೆ

(ಸಕಲಜನವಶ್ಯತೆ)

ಓ ತಾಯಿ ! ಅನೇಕ ಯುದ್ಧಗಳಲ್ಲಿ ರಾಕ್ಷಸರನ್ನು ಗೆದ್ದು ಶಿರಸ್ತ್ರಾಣವನ್ನು ಕಳಚಿಟ್ಟು ಕೇವಲ ಕವಚದೊಡನೇ ಹಿಂತಿರುಗಿದ ಷಣ್ಮುಖ-ದೇವೇಂದ್ರ-ಉಪೇಂದ್ರರು ಚಂಡನೆಂಬ ಪ್ರಮಥನಿಗೆ ಮಾತ್ರ ಸಲ್ಲಬೇಕಾದ ಶಿವನಿರ್ಮಾಲ್ಯವನ್ನು ಸೇವಿಸಲು ಇಷ್ಟವಿಲ್ಲದೇ ಚಂದ್ರಖಂಡಗಳಿಂದ ಕೂಡಿದ ನಿನ್ನ ಬಾಯಲ್ಲಿರುವ ತಾಂಬೂಲದ ಕವಳಗಳನ್ನು ಭಕ್ತಿಯಿಂದ ಸೇವಿಸುತ್ತಿರುವರು.

66. ವಿಪಂಚ್ಯಾ ಗಾಯನ್ತೀ—P. 154.

ಕಂಠಮಾಧುರ್ಯವರ್ಣನೆ

(ವೀಣಾದಿ ಸಂಗೀತವಿದ್ಯಾಕುಶಲತೆ)

ಓ ದೇವಿ ! ಸರಸ್ವತಿಯು ಪಶುಪತಿಯ ವಿವಿಧವಾದ ಪೂರ್ವಚರಿತೆಗಳನ್ನು ವೀಣೆಯಿಂದ ಹಾಡುತ್ತಿರುವಾಗ, ನೀನೇನಾದರೂ ಮಧ್ಯದಲ್ಲಿ ತಲೆದೂಗುತ್ತ ಅದಕ್ಕೆ ಪೋಷಕವಾಗಿ ಮಧುರವಾಣಿಗಳನ್ನು ಆಡಲು ಆರಂಭಿಸಿದರೆ ಅವಳು ತನ್ನ ವೀಣೆಯನ್ನೇ ಹೊದ್ದಿಕೆಯಿಂದ ಮುಚ್ಚಲು ಅನುವಾಗುತ್ತಾಳೆ. ಏಕೆಂದರೆ—ನಿನ್ನ ಕಂಠಮಾಧುರ್ಯವು ಆ ವೀಣೆಯ ಅವ್ಯಕ್ತ ಮಧುರನಾದವನ್ನೂ ಪರಿಹಾಸ ಮಾಡುವಂತಿದೆಯಲ್ಲವೇ ?

67. ಕರಾಗ್ರೇಣ ಸ್ಪೃಷ್ಟಂ—P. 155.

ಗಲ್ಲದ ವರ್ಣನೆ

(ಸಕಲಸ್ತ್ರೀವಶ್ಯತೆ)

ಓ ಹಿಮವನ್ತನ ಕುಮಾರಿ ! ನಿನ್ನ ಗಲ್ಲದ ಮಹಿಮೆಯನ್ನು ಏನೆಂದು ವರ್ಣಿಸೋಣ ? ಏಕೆಂದರೆ—ಅದನ್ನು ಹಿಮವಂತನು ವಾತ್ಸಲ್ಯಭಾವದಲ್ಲಿ ಸವರಿದಾನೆ. ಈಶ್ವರನು ಅಧರಾಮೃತಪಾನದ ಆಸಕ್ತಿಯಿಂದ ಎಷ್ಟೋಸಲ ಹಿಡಿದೆತ್ತಿದಾನೆ. ಅದನ್ನು ನೋಡಿದಾಗ ಈಶ್ವರನು ಹಿಡಿದುಕೊಳ್ಳುವ ಮುಖಕನ್ನಡಿಯ ಕಾವೋ ಎನ್ನುವಂತಿದೆ. ಅದಕ್ಕೆ ಸಮಾನವಾದ ವಸ್ತುವಾದರೂ ಬೇರೆ ಇಲ್ಲವಷ್ಟೇ.

68. ಭುಜಾಶ್ಲೇಷಾನ್ನಿತ್ಯಂ—P. 156.

ಕುತ್ತಿಗೆಯ ವರ್ಣನೆ

(ಸಕಲರಾಜವಶ್ಯತೆ)

ಓ ದೇವಿ ! ಈ ನಿನ್ನ ಕಂಠವು ತ್ರಿಪುರಾನ್ತಕನಾದ ಶಿವನ ಭುಜಾಲಿಂಗನಗಳಿಂದ ಯಾವಾಗಲೂ ರೋಮಾಂಚಿತವಾಗಿ, ನಿನ್ನ ಮುಖವೆಂಬ ಕಮಲಕ್ಕೆ ನಾಳದಂಡದಂತಿರುವುದು. ಆದರ ಕೆಳಗೆ ಸಹಜವಾಗಿ ಬೆಳ್ಳಗಿರುವ ಮುತ್ತು, ಕೃಷ್ಣಾಗರುಚಂದನದ ಕೆಸರಿನಿಂದ ಮಲಿನವಾದ ಮುತ್ತಿನ ಹಾರವೂ ಸಹ ಈ ಭಾವಕ್ಕೆ ಪೋಷಕವಾಗಿ ತಾವರೆ ಬಳ್ಳಿಯ ಸೌಂದರ್ಯವನ್ನು ತಾಳಿದೆ.

69. ಗಲೇ ರೇಖಾಸ್ತಿಸ್ರಃ—p. 157.

ಕಂಠದ ವಲಿತ್ರಯವರ್ಣನೆ

(ಸ್ತ್ರೀವಶ್ಯತೆ)

ಸಂಗೀತದ ಗತಿ ಗಮಕ ಮತ್ತು ಗೀತಗಳ ರಹಸ್ಯವನ್ನು ಚೆನ್ನಾಗಿ ಅರಿತವಳೇ ! ದೇವಿ ! ನಿನ್ನ ಕಂಠಪ್ರದೇಶದಲ್ಲಿರುವ ಮೂರು ರೇಖೆಗಳು ವಿವಾಹಸಮಯದಲ್ಲಿ ಧರಿಸಲ್ಪಟ್ಟ ಅನೇಕ ಎಳೆಗಳುಳ್ಳ ಮಂಗಳಸೂತ್ರವನ್ನು ಚಿತ್ರಿಸುತ್ತವೆ, ಮತ್ತು ನಾನಾವಿಧವಾದ ಮಧುರ ರಾಗಗಳಿಗೆ ಗಣಿಯಂತಿರುವ ಷಡ್ಜ ಮಧ್ಯಮ ಗಾಂಧಾರವೆಂಬ ಮೂರು ಗ್ರಾಮಗಳ ನಿಯಮಿತ ಸೀಮೆಯನ್ನು ಚಿತ್ರಿಸುತ್ತಿವೆಯೋ ಎಂಬಂತೆಯೂ ಪ್ರಕಾಶಿಸುತ್ತಿವೆ.

70. ಮೃಣಾಲೀ ಮೃದ್ವೀನಾಂ—P. 159.

ಭುಜಗಳ ವರ್ಣನೆ

(ಸಕಲಪುರುಷವಶ್ಯತೆ)

ಓ ದೇವಿ ! ಬ್ರಹ್ಮದೇವನು ತಾವರೆಯ ದಂಟಿನಂತೆ ಸುಕುಮಾರತರವಾದ ನಾಲ್ಕು ಭುಜಲತೆಗಳ ಸೌಂದರ್ಯವನ್ನು ತನ್ನ ನಾಲ್ಕು ಮುಖಗಳ ಮೂಲಕವೂ ವರ್ಣಿಸುತ್ತಾನೆ. ಇದನ್ನು ನೋಡಿದರೆ—ಪ್ರಾಯಶಃ ಮೊದಲು ಶಿವನು ತನ್ನ ಒಂದು ತಲೆಯನ್ನು ಕತ್ತರಿಸಿದ್ದರಿಂದ ಅದಕ್ಕೆ ಹೆದರಿ ಬಾಕಿ ನಾಲ್ಕು ತಲೆಗಳಿಗೂ ಅಭಯ ಹಸ್ತವನ್ನು ಬೇಡುವವನಾಗಿ ಹೀಗೆ ಮಾಡುತ್ತಿರಬೇಕೆಂದು ತೋರುತ್ತದೆ.

71. ನಖಾನಾಮುದ್ಯೋತೈಃ—P. 160.

ಮುಂಗೈಗಳ ವರ್ಣನೆ

(ಯಕ್ಷಿಣೀವಶ್ಯತೆ)

ಓ ಪಾರ್ವತಿ ! ನಿನ್ನ ನಾಲ್ಕು ಮುಂಗೈಗಳೂ ಆಗತಾನೇ ಅರಳಿದ ಕೆಂದಾವರೆಯನ್ನು ಅಲ್ಲಗಳೆಯುವಷ್ಟು ಕೆಂಪಾಗಿದೆ. ಇದಕ್ಕೆ ನಿನ್ನ ಉಗುರುಗಳ ಪ್ರಭಾವವವೇ ಕಾರಣ. ಇದನ್ನು ನೋಡಿದರೆ—ಪದ್ಮಾಲಯೆಯಾದ ಲಕ್ಷ್ಮಿಯು ಕಮಲದಲ್ಲಿ ಕ್ರೀಡಿಸುವಾಗ ಆಕೆಯ ಅಂಗಾಲಿನಲ್ಲಿರುವ ಅರಗಿನ ರಸದಿಂದ ಕಮಲವೂ ಕೆಂಪಾಗುವುದಾದರೆ ಮಾತ್ರ ಅದನ್ನು ಇದಕ್ಕೆ ಹೋಲಿಸಬಹುದೆಂದು ತೋರುವುದು.

72. ಸಮಂ ದೇವಿ ಸ್ಕನ್ದ—P, 161.

ಕುಚಗಳ ವರ್ಣನೆ

(ನಿರ್ಭಯತೆ)

ಓ ದೇವಿ ! ಒಂದು ಸಮಯದಲ್ಲಿ ವಿನಾಯಕನು ಹಾಲನ್ನು ಕುಡಿಯುತ್ತಿರುವಾಗ ನಿನ್ನ ಸ್ತನಗಳ ಸ್ಥೌಲ್ಯವನ್ನು ಕಂಡು ಇವೇ ಕುಂಭಸ್ಥಳಗಳೋ ಎಂಬ ವ್ಯಾಕುಲತೆ

ಯಿಂದ ತನ್ನ ತಲೆಯನ್ನು ಸವರಿಕ್ಕೊಂಡು ನೋಡಿ ನಿನಗೆ ನಗೆಯನ್ನುಂಟುಮಾಡಿದ್ದ ನಂತೆ. ಅಷ್ಟು ಸ್ಥೂಲವಾಗಿದ್ದು ಸದಾ ವಾತ್ಸಲ್ಯದಿಂದ ಸ್ತನ್ಯವನ್ನು ವರ್ಷಿಸುತ್ತಾ ಸಮಕಾಲದಲ್ಲಿ ಷಣ್ಮುಖ-ವಿನಾಯಕರಿಂದ ಪಾನಮಾಡಲ್ಪಡುವ ನಿನ್ನ ಸ್ತನಮಂಡಲವು ನಮ್ಮ ಎಲ್ಲಾ ಖೇದವನ್ನೂ ಪರಿಹರಿಸಲಿ.

73. ಅಮೂ ತೇ ವಕ್ಷೋಜಾ– P. 162.

ಸ್ತನ್ಯವರ್ಣನೆ

(ಧೇನು–ಸ್ತ್ರೀಯರಿಗೆ ಸ್ತನ್ಯಸಮೃದ್ಧಿ)

ಹಿಮವಂತನ ವಂಶಕ್ಕೆ ಪತಾಕೆಯಂತಿರುವವಳೇ! ದೇವಿ! ನಿನ್ನ ಸ್ತನಗಳೆರಡೂ ಅಮೃತರಸಪೂರಿತವಾದ ಮಾಣಿಕ್ಯದ ಬಿಂದಿಗೆಗಳೇ ಸರಿ. ಇದರಲ್ಲಿ ನಮಗೆ ಸ್ವಲ್ಪವೂ ಸಂಶಯವಿಲ್ಲ. ಏಕೆಂದರೆ ಆ ಸ್ತನ್ಯಪಾನವನ್ನು ಮಾಡಿ ಬೆಳೆದ ವಿನಾಯಕನೂ ಷಣ್ಮುಖನೂ ಸ್ತ್ರೀಸಂಗವನ್ನು ಸವಿಯಲು ಮೂಲವಾದ ಶೃಂಗಾರ ರಸವನ್ನೇ ಅರಿಯದವರಾಗಿ ಇಂದಿಗೂ ಕುಮಾರಾವಸ್ಥೆಯಲ್ಲೇ ಇರುವರಲ್ಲವೇ?

74. ವಹತ್ಯಮ್ಬ ಸ್ತಮ್ಬೇರಮ—P. 164.

ಮುತ್ತಿನ ಹಾರದ ವರ್ಣನೆ

(ಕೀರ್ತಿಲಾಭ)

ಓ ತಾಯಿ! ಗಜಾಸುರನ ಕುಂಭಸ್ಥಳದಲ್ಲಿ ಉದ್ಭವಿಸಿದ ಮುತ್ತಿನ ಮಣಿಗಳಿಂದ ಖಚಿತವೂ ಶುದ್ಧವೂ ಆದ ಮುತ್ತಿನ ಹಾರಲತೆಯೊಂದು ನಿನ್ನ ಸ್ತನಮಂಡಲಗಳನ್ನು ಅಲಂಕರಿಸಿದೆ. ಆ ಮುತ್ತಿನಲ್ಲಿ ತೊಂಡೆಯಹಣ್ಣಿನಂತಿರುವ ನಿನ್ನ ಕೆಂದುಟಿಯು ಪ್ರತಿಬಿಂಬಿಸುತ್ತಿದೆ. ಇದು ತ್ರಿಪುರಾನ್ತಕನ ಪ್ರತಾಪಾಂಕಿತವಾದ ಕೀರ್ತಿಮಾಲೆಯೋ ಎಂಬಂತೆ ತೋರುತ್ತಿದೆ.

75. ತವ ಸ್ತನ್ಯಂ ಮನ್ಯೇ—P. 165.

ಸ್ತನ್ಯದ ಮಹಿಮೆ

(ಕವಿತಾಶಕ್ತಿ ಲಾಭ)

ಓ ದೇವಿ! ಕ್ಷೀರಸಮುದ್ರವು ನಿನ್ನ ಹೃದಯದ ಮೂಲಕ ಸರಸ್ವತೀ ನದಿಯನ್ನೇ ಸ್ತನ್ಯರೂಪವಾಗಿ ಹರಿಯಿಸುತ್ತಿರಬಹುದು. ಏಕೆಂದರೆ—ಕರುಣಾಮಯಿಯಾದ ನಿನ್ನ ಈ ಸ್ತನ್ಯವನ್ನು ಕುಡಿದು ಬೆಳೆದ ದ್ರವಿಡ ಶಿಶುವೊಂದು ಪ್ರೌಢರಾದ ಕವಿಗಳ ಮಧ್ಯದಲ್ಲಿ ರಾರಾಜಿಸುವ ಶ್ಲಾಘನೀಯ ಕವಿರಾಜನೇ ಆಗಿರುವನಲ್ಲವೇ?

76. ಹರಕ್ರೋಧಜ್ವಾಲಾ—P. 166.

ರೋಮಾವಳಿಯ ವರ್ಣನೆ

(ಸಕಲಜನವಶ್ಯತೆ)

ಓ ಪರ್ವತರಾಜಕುಮಾರಿ! ಮನ್ಮಥನ ದೇಹವನ್ನು ಹರನ ಕೋಪಾಗ್ನಿಯ ಜ್ವಾಲೆಯು ಆವರಿಸಿದಾಗ ಅವನು ಆ ತಾಪವನ್ನು ತಡೆಯಲಾರದೇ ನಿನ್ನ ನಾಭಿಯೆಂಬ ಆಳವಾದ ಸರಸ್ಸಿನಲ್ಲಿ ಮುಳುಗಿದನು, ಆದರಿಂದ ಹೊಗೆಯ ಬಳ್ಳಿಯು ಮೇಲಕ್ಕೆ ಎದ್ದಿತು. ಅದನ್ನೇ ಲೋಕವು ನಿನ್ನ ರೋಮರಾಜಿ ಎಂದು ವರ್ಣಿಸುತ್ತಿರಬಹುದೇ ?

77. ಯದೇತತ್ಕಾಲಿನ್ದೀ—P. 167.

ರೋಮಾವಳಿಯ ವರ್ಣನೆ

(ರಾಜವಶ್ಯತೆ)

ಓ ಜಗನ್ಮಾತೇ! ನಿನ್ನ ಕೃಶವಾದ ನಡುವಿನಲ್ಲಿ ಯಮುನಾನದಿಯ ಅತಿಸೂಕ್ಷ್ಮವಾದ ಅಲೆಯ ಆಕಾರದ ನೀಲ ರೋಮಾವಳಿಯು ಒಂದು ರೂಪ ರೇಖೆಯು ಇರುವುದಲ್ಲವೇ? ಇದನ್ನು ಕವಿಗಳು ಹೀಗೆ ವರ್ಣಿಸಬಹುದು—ನಿನ್ನ ಸ್ತನಮಂಡಲದ ಇಕ್ಕಟನಲ್ಲಿ ಸಿಲುಕಿಕೊಂಡಿರುವ ನೀಲಾಕಾಶವು ತನ್ನ ಎರಡು ಕಡೆಯ ಸ್ತನಗಳ ಒತ್ತಡದಿಂದ ಸೊರಗಿ ಕೃಶವಾಗಿ ಬಿಲದ ಆಕಾರದಲ್ಲಿರುವ ನಿನ್ನ ಹೊಕ್ಕಳನ್ನು ಪ್ರವೇಶಿಸುತ್ತಿದೆಯೋ ಎಂಬಂತಿದೆ—ಎಂದು.

78. ಸ್ಥಿರೋ ಗಙ್ಗಾವರ್ತಃ—P. 168.

ನಾಭಿಯ ವರ್ಣನೆ

(ಸಕಲರಾಜವಶ್ಯತೆ)

ಓ ಪಾರ್ವತಿ! ನಿನ್ನ ನಾಭಿಯು ಗಂಗೆಯ ಪ್ರವಾಹದಲ್ಲಿ ಉದ್ಭವಿಸಿದ ಶಾಶ್ವತವಾದ ಸುಳಿಯಂತಿದೆ. ನಿನ್ನ ಸ್ತನಗಳಾದರೋ ಆ ರೋಮಾವಳಿಯೆಂಬ ಲತೆಯಲ್ಲಿ ಬಿಟ್ಟಿರುವ ಮೊಗ್ಗುಗಳಂತಿದ್ದು ಆ ಲತೆಗೆ ಈ ನಾಭಿಯು ಪಾತಿಯಂತಿದೆ. ಈ ನಾಭಿಯು ಕಾಮಾಗ್ನಿಯ ಹೋಮಕುಂಡದಂತಿದೆ, ರತೀದೇವಿಯ ವಿಲಾಸಮಂದಿರವಾಗಿದೆ, ಮತ್ತು ಶಿವನ ಕಣ್ಣುಗಳ ತಪಸ್ಸಿದ್ಧಿಯ ಗುಹಾದ್ವಾರವಾಗಿದೆ. ಹೀಗೆ ಬಣ್ಣಿಸಲೇ ಅಸಾಧ್ಯವಾದ ಅದ್ಭುತಾಕಾರವನ್ನು ಹೊಂದಿ ರಾರಾಜಿಸುತ್ತಿದೆ.

79. ನಿಸರ್ಗಕ್ಷೀಣಸ್ಯ—P. 169.

ಮಧ್ಯವರ್ಣನೆ

(ಇಂದ್ರಜಾಲವಿದ್ಯಾನೈಪುಣ್ಯಲಾಭ)

ಓ ನಾರೀಮಣಿಯಾದ ಶೈಲಜೇ ! ನಿನ್ನ ನಡುವು ಸಹಜಕೃಶವಾಗಿದೆ. ಕುಚಗಳ ಭಾರದಿಂದ ಶ್ರಾನ್ತವಾಗಿ ಬಾಗಿ ಬಳುಕುತ್ತಿದೆ. ಪ್ರವಾಹವೇಗಕ್ಕೆ ಕಳಚಿಬೀಳುವ ಸ್ಥಿತಿಯಲ್ಲಿರುವ ನದಿಯೊಂದರ ದಡದಲ್ಲಿ ಬೆಳೆದು ನಿಂತಿರುವ ವೃಕ್ಷದಂತೆ ಇರುವ ನಿನ್ನ ನಡುವು ಅನನ್ತಕಾಲ ನಿರಪಾಯವಾಗಿ ಬೆಳಗಲಿ.

80. ಕುಚೌ ಸದ್ಯಃ ಸ್ವಿದ್ಯತ್—P. 170.

ವಲಿತ್ರಯವರ್ಣನೆ

(ಇಂದ್ರಜಾಲದರ್ಶನ ಸಾಮರ್ಥ್ಯಲಾಭ)

ಓ ದೇವಿ ! ನೀನು ತೊಟ್ಟುಕೊಂಡಿರುವ ಕುಪ್ಪಸವು—ಸುರಿಯುತ್ತಿರುವ ಬೆವರಿನಿಂದಲೂ, ಕಂಕುಳುಗಳನ್ನು ಒತ್ತುತ್ತಿರುವಷ್ಟು ಸ್ಥೂಲವಾದ ಚಿನ್ನದ ಕೊಡದಂತಿರುವ ಸ್ತನಗಳ ಒತ್ತಡಗಳಿಂದಲೂ ಎಳೆಬಿಟ್ಟು ಹೋಗುತ್ತಿದೆಯಲ್ಲವೇ? ಇದನ್ನು ಗಮನಿಸಿದರೆ ಬ್ರಹ್ಮನು ಇದರ ಪ್ರಭಾವದಿಂದ ನಿನ್ನ ನಡುವು ತುಂಡಾಗದಿರಲೆಂದೇ ಸೊಂಟಕ್ಕೆ ಮೂರು ಕಟ್ಟುಗಳನ್ನು ಕಟ್ಟಿ ಬಿಗಿದಿದಾನೆಯೋ ಎಂಬಂತಿದೆ ನಿನ್ನ ನಡುವಿನ ತ್ರಿವಳಿಯು.

81. ಗುರುತ್ವಂ ವಿಸ್ತಾರಂ—P. 171.

ನಿತಂಬವರ್ಣನೆ

(ಅಗ್ನಿಸ್ತಂಭನ)

ಓ ಪಾರ್ವತಿ ! ಹಿಮವಂತನು ತನ್ನಲ್ಲಿ ಗುರುತ್ವವನ್ನೂ ವೈಶಾಲ್ಯವನ್ನೂ ತನ್ನ ನಿತಂಬ ಪ್ರದೇಶದಿಂದ ತೆಗೆದು ನಿನ್ನ ವಿವಾಹ ಕಾಲದಲ್ಲಿ ನಿನಗೆ ಬಳುವಳಿಯಾಗಿ ಕೊಟ್ಟಿರಬಹುದು. ಆದ್ದರಿಂದಲೇ ನಿನ್ನ ಈ ನಿತಂಬವು ಅತಿಶಯವಾದ ಗುರುತ್ವವನ್ನೂ ವೈಶಾಲ್ಯವನ್ನೂ ವಹಿಸಿ ಸಮಸ್ತ ಭೂಮಿಯನ್ನೂ ಆವರಿಸುತ್ತಾ ಅದನ್ನು ಹಗುರವಾಗಿ ಮಾಡುತ್ತಿರಬಹುದು.

82. ಕರೀನ್ದ್ರಾಣಾಂ ಶುಣ್ಡಾ—P. 173.

ತೊಡೆಗಳ ವರ್ಣನೆ

(ಜಲಸಂಚಾರಸಾಮರ್ಥ್ಯಲಾಭ)

ವಿಧಿಯ ರಹಸ್ಯವೆಲ್ಲವನ್ನೂ ಬಲ್ಲ ಪಾರ್ವತಿ ! ನಿನ್ನ ಒಂದೊಂದು ತೊಡೆಯೂ ಶ್ರೇಷ್ಠವಾದ ಆನೆಯ ಸೊಂಡಿಲನ್ನೂ ಹೊಂಬಾಳೆಯ ಕಂಬವನ್ನೂ ತನ್ನ ಸ್ವರೂಪದಿಂದ ಸೋಲಿಸಿದೆ. ಪತಿಗೆ ಸಲ್ಲಿಸುತ್ತಿರುವ ಅನಂತ ನಮಸ್ಕಾರಗಳಿಂದ ಕಾಠಿನ್ಯವನ್ನು ಹೊಂದಿರುವ ಮೊಣಕಾಲುಗಳಾದರೋ ದಿಗ್ಗಜಗಳ ಕುಂಭಸ್ಥಳಗಳನ್ನು ಸೋಲಿಸಿವೆ. ಇಂತಹ ಅಂಗಗಳಿಂದ ನೀನು ತುಂಬ ಪ್ರಕಾಶಿಸುತ್ತೀಯೆ.

83. ಪರಾಜೇತುಂ ರುದ್ರಂ—P. 175.

ಮೊಣಕಾಲುಗಳ ವರ್ಣನೆ

(ಗಜತುರಗಸೈನ್ಯಸ್ತಂಭನ)

ಓ ಪಾರ್ವತಿ ! ಪ್ರಾಯಶಃ ಕಾಮದೇವನು ಶಿವನನ್ನು ಸೋಲಿಸಲು ನಿನ್ನ ಮೊಣಕಾಲುಗಳನ್ನು—ತನ್ನ ಪಂಚ ಬಾಣಗಳನ್ನು ಇಮ್ಮಡಿಯಾಗಿ ತುಂಬಿದ ಎರಡು ಬತ್ತಳಿಕೆಗಳನ್ನಾಗಿ ಮಾಡಿಕೊಂಡಿರಬಹುದು, ಏಕೆಂದರೆ—ಆ ಮೊಣಕಾಲುಗಳೆಡರ ತುದಿಯಲ್ಲಿ ಪದನಖಗಳ ನೆಪದಿಂದ ಕಾಣುವುದು—ದೇವತೆಗಳ ಕಿರೀಟಗಳೆಂಬ ಸಾಣೇಕಲ್ಲುಗಳಿಂದ ಹರಿತವಾದ ಬಾಣಾಗ್ರಗಳೇ ಅಲ್ಲವೇ ?

84. ಶ್ರುತೀನಾಂ ಮೂರ್ಧಾನಃ—P. 176.

ಚರಣಾನುಗ್ರಹಪ್ರಾರ್ಥನೆ

(ಪರಕಾಯಪ್ರವೇಶ ಶಕ್ತಿಲಾಭ)

ಓ ತಾಯಿ ! ಯಾವ ನಿನ್ನ ಪಾದಗಳನ್ನು ವೇದಾಂತಗಳಾದ ಉಪನಿಷತ್ತುಗಳು ತಮ್ಮ ಶಿರಸ್ಸಿಗೆ ಅಲಂಕಾರವಾಗಿ ಧರಿಸಿವೆಯೋ, ಯಾವ ನಿನ್ನ ಪಾದಗಳನ್ನು ತೊಳೆಯಲು ಯೋಗ್ಯವಾದ ತೀರ್ಥವು ಈಶ್ವರಜಟೆಯಲ್ಲಿ ಗಂಗೆಯಾಗಿ ನಿಂತಿದೆಯೋ, ಯಾವ ನಿನ್ನ ಪಾದಗಳಲ್ಲಿರುವ ಅರಗಿನ ಸೊಬಗು ವಿಷ್ಣುವಿನ ಎಳೆಗೆಂಪಿನ ಚೂಡಾಮಣಿಯ ಕಾಂತಿಯಾಗಿದೆಯೋ, ಅಂತಹ ಪಾದಗಳೆರಡನ್ನೂ ನನ್ನ ಶಿರಸ್ಸಿನಮೇಲೂ ದಯೆಯಿಂದ ಇರಿಸುವವಳಾಗು.

85 ನಮೋವಾಕಂ ಬ್ರೂಮ :—P. 177

ಚರಗಳಿಗೆ ನಮಸ್ಕಾರ

(ಭೂತಬಾಧಾ ನಿವೃತ್ತಿ)

ಓ ದೇವಿ ! ಕಣ್‌ಗಳನ್ನು ತಣಿಸುವ ಮತ್ತು ಅರಗಿನ ರಸದಿಂದ ಅಲಂಕೃತವಾದ ನಿನ್ನ ಈ ಪಾದಗಳನ್ನು ವಂದಿಸುತ್ತೇನೆ. ನಿನ್ನ ಪಾದಾಘಾತವನ್ನು ಹೊಂದಿ ಚಿಗುರಲು ಬಯಸುತ್ತಿರುವ ಪ್ರಮದವನದ ಅಶೋಕವೃಕ್ಷದ ವಿಷಯದಲ್ಲಿ ಪಶುಪತಿಯೂ ಸಹ ಬಹಳ ಅಸೂಯೆ ಪಡಬಹುದಲ್ಲವೇ ?

86. ಮೃಷಾಕೃತ್ವಾ ಗೋತ್ರ—P. 179.

ಕಾಲುಂದುಗೆಯ ವರ್ಣನೆ

(ಸಮಸ್ತ ಪಿಶಾಚಬಾಧಾನಿವೃತ್ತಿ)

ಓ ದೇವಿ ! ನಿನ್ನ ಕಾಲುಂದುಗೆಯ ಧ್ವನಿಯನ್ನು ಮನ್ಮಥನ ಜಯಘೋಷವೆಂದು ವರ್ಣಿಸಬಹುದು. ಅಂದರೆ—ನಿನ್ನ ಪತಿಯು ಮಿಗಿಲಾದ ಪ್ರೇಮಪಾರವಶ್ಯದಲ್ಲಿ ಆಕಸ್ಮಾತ್ ಮೈಮರೆತು ಬೇರೊಬ್ಬ ನಾಯಿಕೆಯ. ಹೆಸರನ್ನು ಉಚ್ಚರಿಸಿಬಿಟ್ಟಾಗ ಅವನಿಗೇ ಅದು ನಾಚಿಕೆಯನ್ನು ಕೊಟ್ಟುಬಿಡುತ್ತದೆ. ಆಗ ಅವನು ನಮಸ್ಕರಿಸುವನು. ನೀನಾದರೂ ಪ್ರಣಯಕೋಪದಿಂದ ಅವನನ್ನು ಒದೆಯುವೆಯಲ್ಲವೇ ? ಆ ಸಮಯದಲ್ಲಿ ಅವನ ಶತ್ರುವಾದ ಮನ್ಮಥನು ತನ್ನನ್ನು ದಹಿಸಿದ ಕೋಪಕ್ಕೆ ಪ್ರತೀಕಾರವನ್ನು ತೋರಿಸಲು ಕಿಲಕಿಲವೆಂದು ನಗುತ್ತಿರುವನೋ ಎನ್ನುವಂತಿದೆ.

87. ಹಿಮಾನೀ ಹನ್ತವ್ಯಂ—P. 180.

ಪದಕಮಲವರ್ಣನೆ

(ಸರ್ಪಾನಯನ ಸಾಮರ್ಥ್ಯಲಾಭ)

ಲೋಕದಲ್ಲಿ ಕಾಣುವ ಕಮಲವು ಹಿಮದಿಂದ ಹಾಳಾಗುವುದು. ರಾತ್ರಿಹೊತ್ತು ಮುಕುಲಿತವಾಗಿ ನಿದ್ರಿಸುವುದು. ಕೇವಲ ಲಕ್ಷ್ಮಿಗೆ ಆಶ್ರಯವಾಗಿರುವುದು. ಇಷ್ಟೇ, ಆದರೆ ನಿನ್ನ ಪದಕಮಲಗಳಾದರೋ—ಹಿಮಗಿರಿಯಲ್ಲಿಯೇ ನಿರನ್ತರ ಬೆಳಗುವುವು. ಹಗಲಿರುಳೂ ಏಕಪ್ರಕಾರ ಜಾಗೃತವಾಗಿರುವುವು. ಭಕ್ತರಿಗೆ ಅಖಂಡೈಶ್ವರ್ಯವನ್ನು ನೀಡುವುವು. ಹೀಗಾಗಿ ನಿನ್ನ ಚರಣಗಳು ಕಮಲಗಳನ್ನು ಗೆದ್ದಿವೆ ಎಂದು ಹೇಳುವುದರಲ್ಲಿ ಆಶ್ಚರ್ಯವೇನಿದೆ ?

88. ಪದಂ ತೇ ಕೀರ್ತೀನಾಂ—P. 181.

ಪಾದಾಗ್ರವರ್ಣನೆ

(ಮೃಗಾನಯನ ಸಾಮರ್ಥ್ಯಲಾಭ)

ಓ ದೇವಿ ! ಸಕಲ ಕೀರ್ತಿಗಳಿಗೂ ಉಗಮಸ್ಥಾನವಾಗಿ ಸಕಲ ಆಪತ್ತುಗಳನ್ನೂ ನಿವಾರಿಸುವುದಾದ ನಿನ್ನ ಪಾದಾಗ್ರಗಳನ್ನು ಕವಿಗಳು ಆಮೆಯ ಬೆನ್ನಿನ ಚಿಪ್ಪಿಗೆ ಹೋಲಿಸಿರುವರು. ಇದು ಹೇಗೆ ಸರಿ ? ಹಾಗೆಯೇ ದಯಾಮೂರ್ತಿಯಾದ ಶಿವನು ವಿವಾಹ ಸಮಯದಲ್ಲಿ ನಿನ್ನ ಈ ಸುಕುಮಾರತರವಾದ ಪಾದವನ್ನು ತನ್ನ ಕೈಗಳಿಂದಲೇ ಎತ್ತಿ ಹೇಗೆತಾನೇ ಕಲ್ಲಿನಮೇಲೆ ಇರಿಸಿದನು ? ಇದೊಂದೂ ಅರ್ಥವಾಗದ ವಿಷಯವಾಗಿದೆ.

89. ನಖೈರ್ನಾಕಸ್ತ್ರೀಣಾಂ—P. 182.

ಪದಮಹಿಮಾವರ್ಣನೆ

(ಸರ್ವರೋಗಶಮನ)

ಓ ಚಂಡಿ ! ದೇವಲೋಕದ ಕಲ್ಪವೃಕ್ಷಗಳಾದರೋ ಸ್ವರ್ಗಲೋಕದ ದೇವತೆಗಳಿಗೆ ಮಾತ್ರ ತನ್ನ ಚಿಗುರುಗಳೆಂಬ ಕೈಗಳಿಂದ ಇಷ್ಟಾರ್ಥಗಳನ್ನು ಕೊಡುತ್ತವೆ. ದೇವ ಸ್ತ್ರೀಯರ ಕೈಗಳೆಂಬ ತಾವರೆಗಳನ್ನು ಮುಚ್ಚಿಸುವುದರಲ್ಲಿ ಚಂದ್ರನಂತಿರುವ ನಖಗಳಿಂದ ಕೂಡಿದ ನಿನ್ನ ಪಾದಗಳಾದರೋ ಬಡವರೆಲ್ಲರಿಗೂ ಅಮನ್ದವಾದ ಐಶ್ವರ್ಯವನ್ನೇ ಧಾರೆಯೆರೆಯುತ್ತಿವೆ.

90. ದದಾನೇ ದೀನೇಭ್ಯಃ—P. 183.

ಚರಣಭಕ್ತಿ ಪ್ರಾರ್ಥನೆ

(ಕ್ಷುದ್ರಬಾಧಾನಿವೃತ್ತಿ)

ಓ ದೇವಿ ! ದೀನರಿಗೆ ಅವರ ಆಸೆಗನುಗುಣವಾದ ಎಲ್ಲಾ ಸಂಪತ್ತನ್ನೂ ಯಾವಾಗಲೂ ನೀಡುವ ಎಣೆಯಿಲ್ಲದ ಸೌಂದರ್ಯರಾಶಿಯೆಂಬ ಪುಷ್ಪರಸವನ್ನು ವರ್ಷಿಸುತ್ತಿರುವ ಮಂದಾರ ಹೂಗೊಂಚಲಿನ ಸೌಭಾಗ್ಯವುಳ್ಳ ನಿನ್ನ ಈ ಚರಣದಲ್ಲಿ ಪಂಚೇನ್ದ್ರಿಯ ಮನಸ್ಸುಗಳೆಂಬ ಆರು ಕಾಲುಗಳನ್ನುಳ್ಳ ನನ್ನ ಜೀವವು ಮುಳುಗಿ ಮುಳುಗಿ ಜೇನುದುಂಬಿಯ ಭಾವವನ್ನು ಹೊಂದಿ ನಲಿಯುವಂತಾಗಲಿ.

91. ಪದನ್ಯಾಸಕ್ರೀಡಾ—P. 184.

ಕಾಲ್ದಂಡೆಗಳ ವರ್ಣನೆ

(ಭೂಲಾಭ ಮತ್ತು ಧನಲಾಭ)

ಸುಂದರವಾದ ನಡೆಯುಳ್ಳವಳೇ ! ದೇವಿ ! ನಿನ್ನ ಮನೆಯಲ್ಲಿ ಸಾಕಿದ ಕಲಹಂಸಗಳು ನಿನ್ನ ಪಾದನ್ಯಾಸದಲ್ಲಿರುವ ವಿನೋದದ ಅಭ್ಯಾಸವನ್ನು ಮಾಡಲೋಸುಗವೋ ಎಂಬಂತೆ ಹೆಜ್ಜೆಗಳನ್ನಿಡಲು ಹೊರಟು ಎಡವುತ್ತಾ ಆ ವಿನೋದದ ನಡೆಯನ್ನೇ ಮುಂದುವರಿಸು ತ್ತಿವೆ. ಇದು—ನಿನ್ನ ಪಾದಾರವಿಂದಗಳು ಮನೋಹರ ಮಣಿಮಯವಾದ ಕಾಲ್ದಂಡೆಗಳ ನಾದದ ನೆಪದಿಂದ ಆ ಹಂಸಗಳಿಗೆ ಶಿಕ್ಷಣವನ್ನೇ ಕೊಡುತ್ತಿವೆಯೋ ಎಂಬಂತಿದೆ.

92. ಗತಾಸ್ತೇ ಮಂಚತ್ವಂ—P. 185.

ದೇವೀಸೌಂದರ್ಯವರ್ಣನೆ

(ರಾಜ್ಯಲಾಭ)

ಓ ದೇವಿ ! ಬ್ರಹ್ಮ-ವಿಷ್ಣು-ರುದ್ರರೆಂಬ ಸೇವಕರು ಕೊನೆಗೆ ನಿನ್ನ ಮಂಚವಾದರು. ಸದಾಶಿವನು ಮಾತ್ರ ಶುಭ್ರಕಾನ್ತಿಮಯವಾದ ಹೊದ್ದಿಕೆಯಾಗಿದಾನೆ, ಮತ್ತು ನಿನ್ನ ಎಳೆಗೆಂಪಾದ ಕಾನ್ತಿಯ ಪ್ರತಿಫಲನದಿಂದ ಮೂರ್ತಿವೆತ್ತ ಶೃಂಗಾರರಸದಂತೆ ನಿನ್ನ ಕಣ್ಣುಗಳನ್ನು ತಣಿಸುತ್ತಿದಾನೆ.

93. ಅರಾಲಾ ಕೇಶೇಷು—P. 186.

ದೇವೀಸೌಂದರ್ಯವರ್ಣನೆ

(ಸಕಲಾಭೀಷ್ಟಸಿದ್ಧಿ)

ಕುಟಿಲವಾದ ಮುಂಗುರುಳುಗಳಿಂದಲೂ, ಸ್ವಭಾವಸರಳವಾದ ಮುಗುಳ್ನಗೆಯಿಂದಲೂ, ಶಿರೀಷಕುಸುಮದಂತೆ ಸುಕುಮಾರವಾದ ಮನಸ್ಸಿನಿಂದಲೂ, ಕಠಿಣವಾದ ಸ್ತನಗಳಿಂದಲೂ, ಕೃಶವಾದ ನಡುವಿನಿಂದಲೂ ಸ್ಥೂಲವಾದ ಸ್ತನ-ನಿತಂಬಗಳಿಂದಲೂ ಕೂಡಿದ ಅರುಣವರ್ಣವಾದ ಸದಾಶಿವನ ಕರುಣಾಮಯಶಕ್ತಿಯು ಜಗತ್ತೆಲ್ಲವನ್ನೂ ಕಾಪಾಡಲು ಸಮರ್ಥವಾಗಿದೆಯಲ್ಲವೇ ?

94. ಕಲಂಕಃ ಕಸ್ತೂರೀ—P. 187.

ಚಂದ್ರಮಂಡಲವೇ ದೇವಿಯ ಕರ್ಪೂರಕರಣ್ಡ

(ಇಷ್ಟಾರ್ಥಸಿದ್ಧಿ)

ಓ ದೇವಿ ! ಚಂದ್ರಮಂಡಲದಲ್ಲಿ ಕಾಣುವ ಕಳಂಕವೇ ಕಸ್ತೂರಿ. ಕಲೆಗಳೆಂಬ ಕರ್ಪೂರದಿಂದ ತುಂಬಿದ ಜಲಮಯವಾದ ಆತನ ಮಂಡಲವೇ ಮರಕತಮಣಿಮಯವಾದ ಭರಣಿ. ನಿನ್ನ ದೈನಂದಿನ ಭೋಗದಿಂದ ಬರಿಯದಾಗುತ್ತಿರುವ ಇದನ್ನು ಬ್ರಹ್ಮನು ಮತ್ತೆ ಮತ್ತೆ ಪ್ರಾಯಶಃ ನಿನಗಾಗಿಯೇ ತುಂಬುತ್ತಿರಬಹುದು.

95. ಪುರಾರಾತೇರನ್ತಃಪುರಂ—P. 188.

ಚಂಚಲಚಿತ್ತರಿಗೆ ದೇವೀಪೂಜಾ ದೌರ್ಲಭ್ಯ

(ಸದ್ಯೋವ್ರಣವಿರೋಪಣ)

ಓ ದೇವಿ ! ನೀನು ತ್ರಿಪುರಸಂಹಾರಕನ ಪಟ್ಟಮಹಿಷಿಯಾಗಿರುವೆ. ಆದ್ದರಿಂದಲೇ ಚಪಲ ಚಿತ್ತರಿಗೆ ನಿನ್ನ ಪಾದಗಳನ್ನು ಪೂಜಿಸುವುದು ಅಷ್ಟೇನೂ ಸುಲಭವಲ್ಲ. ಆದ್ದರಿಂದಲೇ ಇಂದ್ರಾದಿ ದೇವತೆಗಳೂ ಸಹ ನಿನ್ನ ಬಾಗಿಲಿನ ಹತ್ತಿರದಲ್ಲೇ ಇರುವ ಅಣಿ

ಮಾದ್ಯೈಶ್ವರ್ಯಗಳಿಂದಲೇ ಅತುಲ ಸಿದ್ಧಿಯನ್ನು ಪಡೆದು ತೃಪ್ತರಾಗಿ ಹಿಂದಿರುಗಿ ಬಿಟ್ಟರು.

96. ಕಳತ್ರಂ ವೈಧಾತ್ರಂ—P. 189.

ದೇವಿಯ ಪಾತಿವ್ರತ್ಯವರ್ಣನೆ

(ವಿದ್ಯಾಲಾಭ)

ಓ ದೇವಿ ! ಬ್ರಹ್ಮನ ಪತ್ನಿಯಾದ ಸರಸ್ವತಿಯನ್ನು ಎಷ್ಟೆಷ್ಟು ಮಂದಿ ಕವಿಗಳು ಭಜಿಸುತ್ತಿಲ್ಲ ? ಹಲವಾರು ಧನಗಳಿಂದ ಯಾರುತಾನೇ ಲಕ್ಷ್ಮಿಗೆ ಸ್ವಾಮಿಯೆನಿಸುತ್ತಿಲ್ಲ? ಓ ಪತಿವ್ರತೆಯರಲ್ಲಿ ಶ್ರೇಷ್ಠಳಾದ ತಾಯಿ ! ನಿನ್ನ ಸ್ತನಗಳ ಆಲಿಂಗನವು ಮಾತ್ರ, ಮಹಾದೇವನನ್ನು ಹೊರತು ಬೇರೆ ಗೋರಂಟಿಗಿಡಕ್ಕೂ ದೋಹನದ ನೆಪದಿಂದಲೂ ದುರ್ಲಭವಾಗಿರುವುದಲ್ಲವೇ ?

97. ಗಿರಾಮಾಹುರ್ದೇವೀಂ—P. 190.

ದೇವಿಯ ತುರೀಯತ್ವವರ್ಣನೆ

(ದೃಢಕಾಯತಾಲಾಭ)

ಓ ಪರಬ್ರಹ್ಮಮಹಿಷಿ ! ಆಗಮಾರ್ಥವನ್ನು ಬಲ್ಲವರು ನಿನ್ನನ್ನೇ ಬ್ರಹ್ಮನ ಗೃಹಿಣಿಯೂ ವಾಗಧಿದೇವತೆಯೂ ಆದ ಸರಸ್ವತಿಯೆಂದೂ, ವಿಷ್ಣುವಿನ ಪತ್ನಿಯಾದ ಲಕ್ಷ್ಮಿಯೆಂದೂ ಶಿವನ ಸಹಧರ್ಮಚಾರಿಣಿಯಾದ ಪಾರ್ವತಿಯೆಂದೂ ಹೇಳುವರು. ನೀನಾದರೋ ತುರೀಯಳಾಗಿ ತಿಳಿಯಲೂ ಅಳೆಯಲೂ ಅಸಾಧ್ಯವಾದ ಮಹಿಮೆಯುಳ್ಳ ಮಹಾಮಾಯೆಯಾಗಿ ನಿಂತು ವಿಶ್ವವನ್ನೇ ಮೋಹಗೊಳಿಸುತ್ತಿರುವೆ !

98. ಕದಾ ಕಾಲೇ ಮಾತಃ—P. 191.

ಪಾದತೀರ್ಥ ಪ್ರಾರ್ಥನೆ

(ಸ್ತ್ರೀಯರಿಗೆ ಗರ್ಭಧಾರಣ, ಪುರುಷರಿಗೆ ವೀರ್ಯಾಭಿವೃದ್ಧಿ)

ಓ ತಾಯಿ ! ಬ್ರಹ್ಮವಿದ್ಯೆಯಲ್ಲಿ ಆಸಕ್ತನಾದ ನಾನು ಅರಗಿನ ರಸದಿಂದ ಮಿಶ್ರವಾದ ನಿನ್ನ ಪಾದೋದಕವನ್ನು ಸೇವಿಸಲು ಇನ್ನೂ ಎಷ್ಟು ಕಾಲ ಬೇಕು ? ಹಾಗೆಯೇ ಹುಟ್ಟುಮೂಗರಿಗೂ ಕವಿತಾಸಾಮರ್ಥ್ಯವನ್ನು ನೀಡಬಲ್ಲ ಆ ತೀರ್ಥವು, ಸರಸ್ವತಿಯ ಮುಖಕಮಲದ ತಾಮ್ಬೂಲರಸವಾಗಿ ಪರಿಣಮಿಸುವ ಭಾಗ್ಯವಾದರೂ ನನಗೆ ಯಾವಾಗ? ಹೇಳಮ್ಮ.

99. ಸರಸ್ವತ್ಯಾ ಲಕ್ಷ್ಮ್ಯಾ—P. 192.

ದೇವೀಭಕ್ತರ ಮಹಿಮೆ

(ಶೌರ್ಯಲಾಭ)

ಓ ದೇವಿ ! ಬ್ರಹ್ಮ ವಿಷ್ಣುಗಳಿಗೂ ಬೇಸರವನ್ನು ತರುವ ರೀತಿಯಲ್ಲಿ ನಿನ್ನನ್ನು ಭಜಿಸುವವನು ಸರಸ್ವತಿ ಮತ್ತು ಲಕ್ಷ್ಮಿಯರೊಂದಿಗೆ ವಿಹರಿಸುತ್ತಾನೆ. ಅತಿಸುಂದರವಾದ ಶರೀರವನ್ನು ಹೊಂದಿ ರತಿಯ ಪಾತಿವ್ರತ್ಯವನ್ನು ಸಡಿಲಗೊಳಿಸುತ್ತಾನೆ. ತಾನು ಬದುಕಿರುವಾಗಲೇ ಅವಿದ್ಯಾಮಾಯೆಗಳ ಬಂಧನವನ್ನು ಬಿಡಿಸಿಕೊಂಡು ಬಹಳ ಕಾಲ ಪರಮಾನನ್ದರಸವನ್ನು ಸವಿಯುತ್ತಾನೆ.

100. ಪ್ರದೀಪಜ್ವಾಲಾಭಿಃ—P. 201.

ಈ ಸ್ತೋತ್ರವನ್ನು ದೇವಿಗೇ ಅರ್ಪಿಸುವುದು

(ಸಕಲಕಾರ್ಯಸಿದ್ಧಿ)

ಓ ಜಗನ್ಮಾತೆ ! ನಿನ್ನದೇ ಆದ ವಾಕ್ಕುಗಳಿಂದ ವಾಙ್ಮಯವಾದ ಈ ನಿನ್ನ ಸ್ತೋತ್ರವನ್ನು ನೆರವೇರಿಸಿದ್ದಾಗಿದೆ. ಇದು—ಸೂರ್ಯನಿಂದ ಪ್ರಕಾಶವನ್ನು ಪಡೆಯುವ ದೀಪಜ್ವಾಲೆಯಿಂದ ಸೂರ್ಯನಿಗೇ ಆರತಿ ಎತ್ತಿದಂತೆಯೂ ಚಂದ್ರಕಾನ್ತಶಿಲೆಯಿಂದ ಜಿನುಗಿಬಂದ ನೀರಿನಿಂದ ಚಂದ್ರನಿಗೇ ಅರ್ಘ್ಯವನ್ನು ರಚಿಸಿದಂತೆಯೂ ಆಗಿದೆ. ಸಾಗರದ ನೀರನ್ನು ಸಾಗರಕ್ಕೇ ಅರ್ಪಿಸಿ, ಕೇವಲ ನಮ್ಮ ಮನಸ್ಸಿನ ಸೌಂದರ್ಯವನ್ನು ಚಿತ್ರಿಸಿಕೊಂಡು, ನಿನ್ನ ಕಡೆಯಿಂದ ಹರಿದುಬರುವ ಕರುಣೆಗೆ ಪಾತ್ರವಾಗಿಸಿಕೊಳ್ಳುವ ಒಂದು ಕೆಲಸವಾಗಿದೇವಮ್ಮ ! ಇದು. ಅಷ್ಟೇ.

|| ॐ ||

---

## अनुबन्धः ४

# (१) सौन्दर्यलहरीश्लोकानां अकाराद्यनुक्रमणिका

## (२) भावनोपनिषद्वाक्यानां अकाराद्यनुक्रमणिका

## (३) पंचस्तवीश्लोकानां अकाराद्यनुक्रमणिका

## (४) ग्रन्थोद्धृतप्रमाणानामकाराद्यनुक्रमणिका

## (५) उद्धृतग्रन्थनाम्नामकाराद्यनुक्रमणिका

## (६) उद्धृतग्रन्थकारनाम्नामकाराद्यनुक्रमणिका

## (७) संदृब्धामलङ्काराणामकाराद्यनुक्रमणिका

# (८) व्याख्यानदृष्टपदविशेषाणां अकाराद्यनुक्रमणिका

---

# ९. संशोधनपत्रिका

| | पु. | पं. |
|---|---|---|
| इदमेव | xxiv | 10 |
| सर्वभूतहितानुशासन | xxxi | 17 |
| समयान्तरे | xxxvi | 11 |
| पूर्वजन्मार्जित | 4 | 11 |
| उभया | 12 | 8 |
| उत्पत्स्यते | 12 | 11 |
| संख्यासंख्येया: | 12 | 15 |
| विशिखा: | 12 | 15 |
| शक्तिभि: | 27 | 4 |
| पुराणेषु | 28 | 16 |
| स्पष्ट | 31 | 9 |
| भवच्चरणो | 37 | 11 |
| बैन्दवस्थाने | 39 | 18 |
| कुण्डलिनी | 40 | 11 |
| चक्रविद्यो | 42 | 10 |
| वर्तते | 49 | 20 |
| शृङ्गार | 53 | 22 |
| दीपिका | 55 | 18 |
| भगवति | 71 | 9 |
| गुह्यतन्त्रम् | 74 | 4 |
| विप्रलम्भकत्वं | 77 | 16 |
| अङ्गत्वं | 80 | 4 |
| एकारपूर्व | 86 | 11 |
| सान्ताष्षोडश | 87 | 3 |
| श्रेयो | 92 | 13 |
| सामर्थ्यं | 94 | 15 |

| | पु. | पं. |
|---|---|---|
| पूजारता: | 97 | 7 |
| कर्णावतंसस्तुतौ | 121 | 23 |
| सामान्येनो | 128 | 7 |
| बाण इति | 139 | 8 |
| मुकुरवृन्तं | 155 | 5 |
| कविशिक्षा | 179 | 13 |
| दृषदुपल | 187 | 1 |
| कथय | 191 | 19 |
| भगवत्पादै: | 193 | 1 |
| मात: | 202 | 3 |
| गिरामाहु: | 202 | 22 |
| षट्चक्रभेदने | 204 | 14 |
| बाधेरन् | 215 | 12 |
| निवर्तेरन् | 219 | 6 |
| महरहस्सहस्र | 241 | 3 |
| वर्धिनीव्या | 262 | 3 |
| श्रुति | 274 | 16 |
| ज्ञानमर्घ्यं | 275 | 19 |
| सम्मतत्वात् | 277 | 16 |
| विघ्नैरविघ्नीकृता: | 293 | 12 |
| पातु न: | 298 | 24 |
| शब्दशक्ति | 301 | 2 |
| केलिषु | 305 | 1 |
| शाम्भववेधदीक्षा | 305 | 8 |
| संदृब्धानामलङ्काराणां | 372 | 3 |

---